# ದೃಶ್ಯಕಲೆಯಲ್ಲಿ ಗಣೇಶ

(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

[ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಕಿರು ಸಂಶೋಧನಾ ಪ್ರಬಂಧ]



ಸಂಶೋಧಕರು
ಮಹಾದೇವಪ್ಪ ಸಣತಂಗಿ

ಮಾರ್ಗದರ್ಶಕರು
ಡಾ. ಎಸ್.ಸಿ.ಪಾಟೀಲ
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ





ಲಲಿತಕಲಾ ನಿಕಾಯ
**ದೃಶ್ಯಕಲಾ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೫

# ದೃಶ್ಯಕಲೆಯಲ್ಲಿ ಗಣೇಶ

## (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ಕಿರುಪ್ರಬಂಧ)

ಸಂಶೋಧಕರು

**ಮಹಾದೇವಪ್ಪ ಸಣತಂಗಿ**

ಮಾರ್ಗದರ್ಶಕರು

**ಡಾ. ಎಸ್.ಸಿ. ಪಾಟೀಲ**

ಪ್ರಾಧ್ಯಾಪಕರು/ಮುಖ್ಯಸ್ಥರು



ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೧-೧೨

# ಪ್ರಮಾಣ ಪತ್ರ

"ದೃಶ್ಯಕಲೆಯಲ್ಲಿ ಗಣೇಶ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)" ಎಂಬ ಕಿರುಪ್ರಬಂಧವನ್ನು ಡಾ. ಎಸ್.ಸಿ. ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಕಿರುಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 14/9/2012

ಮಹಾದೇವಪ್ಪ ಸಣತಂಗಿ
ಸಂಶೋಧಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

**"ದೃಶ್ಯಕಲೆಯಲ್ಲಿ ಗಣೇಶ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)"** ಎಂಬ ಕಿರುಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಮಹಾದೇವಪ್ಪ ಸಣತಂಗಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 14/9/2012

**ಡಾ. ಎಸ್.ಸಿ. ಪಾಟೀಲ**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಕಲೆಯು ಕ್ರಿ.ಪೂ ಕಾಲದಿಂದ ಆಧುನಿಕ ಕಾಲದವರೆಗೆ ಮಾನವನ ಜೊತೆಯಲ್ಲಿಯೇ ಕಲೆಯು ನಾಗರಿಕತೆಯನ್ನು ಕಂಡಿದೆ. ಕಲೆಯು ಮಾನವನ ಅವಿಭಾಜ್ಯ ಅಂಗವಾಗಿದೆ. ಮಾನವನ ರಕ್ತದ ಕಣಕಣದಲ್ಲೂ ಕಲೆಯ ಹಿರಿಮೆ ತುಂಬಿಕೊಂಡು ಬಂದಿದೆ. ಕಲೆಯು ಮಾನವನ ಅವಿಭಾಜ್ಯ ಅಂಗವೆಂದು ಹೇಳಲಿಕ್ಕೆ ಹಲವಾರು ರೀತಿಯ ಉದಾಹರಣೆಗಳಿವೆ. ಕ್ರಿಸ್ತ ಪೂರ್ವಕಾಲದಲ್ಲಿ ಮಾನವನು ಆಹಾರಕ್ಕಾಗಿ ಬೇಟೆಯಾಡುವುದನ್ನು ಮತ್ತು ತನ್ನ ದೇಹದ ರಕ್ಷಣೆಗೋಸ್ಕರ ಕಲ್ಲಾಸರೆಗಳಲ್ಲಿ ಮರದ ಪೊಟರೆಗಳಲ್ಲಿ ವಾಸಿಸುವುದನ್ನು ಕಲಿತ ಮತ್ತು ತನ್ನ ದೇಹಕ್ಕೆ ತಪ್ಪಲುಗಳಿಂದ ರಕ್ಷಿಸುವುದನ್ನು ಕಲಿತ. ಮುಂದೆ ಅವನಲ್ಲಿ ನಾಗರಿಕತೆ ಬೆಳೆದಂತೆಲ್ಲ ಸೌಂದರ್ಯ ಪ್ರಜ್ಞೆಯ ಅರಿವು ಬಂದಮೇಲೆ ತನ್ನ ಮೈಗೆ ವಿವಿಧ ವಸ್ತುಗಳಿಂದ ಅಲಂಕರಿಸುವುದರ ಜೊತೆಗೆ ಮನಸ್ಸಿನಲ್ಲಾದ ಸಂತೋಷಗಳನ್ನು ಕುಣಿಯುವುದರಲ್ಲಿ, ವಿಶೇಷ ಧ್ವನಿ ತೆಗೆದು ಹಾಡುವುದರಲ್ಲಿ ಮಗ್ನನಾದ. ತಾನು ವಾಸಿಸುವ ಸ್ಥಳಗಳ ಬಂಡೆಗಳ ಮೇಲೆ ತನಗೆ ತಿಳಿದ ಹಾಗೆ ಕಲ್ಲುಗಳಿಂದ ಗೀಚತೊಡಗಿದ. ಅವನಿಗೆ ಸಂತೋಷವಾಗತೊಡಗಿದಾಗ ತನ್ನ ಪರಿಸರದಲ್ಲಿ ಕಂಡ ಪ್ರಾಣಿ ಮತ್ತು ಪಕ್ಷಿಗಳ ಚಿತ್ರಗಳನ್ನು ಮನಬಂದಂತೆ ಚಿತ್ರಿಸತೊಡಗಿದ. ಈ ಚಿತ್ರಗಳನ್ನು ಕೊರೆಯುವ ಮತ್ತು ಕುಟ್ಟುವ ಮೂಲಕ ಚಿತ್ರಿಸತೊಡಗಿದ. ಮತ್ತೆ ಮುಂದುವರೆದು ತಾನು ವಾಸಿಸುವ ಗುಹೆಯೊಳಗೆ ನೈಸರ್ಗಿಕ ಬಣ್ಣಗಳನ್ನು ಬಳಸಿ ಚಿತ್ರಗಳನ್ನು ರಚಿಸಿದ (ಉದಾ: ಹೂ, ಹಣ್ಣು, ಕಾಯಿ, ಮರದ ಎಲೆಗಳು, ಬಣ್ಣ ಬಣ್ಣದ ಕಲ್ಲುಗಳನ್ನು ಬಳಸಿ) ಕಾಲಕ್ರಮೇಣ ಚಿತ್ರಗಳನ್ನು ಭಾಷೆಯನ್ನಾಗಿಸಿಕೊಂಡ ಎಂಬ ಉಲ್ಲೇಖಗಳನ್ನು ವಿದ್ವಾಂಸರು ವ್ಯಕ್ತಪಡಿಸುತ್ತಾರೆ.

ಲಿಪಿ ಇಲ್ಲದ ಸಂದರ್ಭದಲ್ಲಿ ಚಿತ್ರವನ್ನು ಬರೆದು ತೋರಿಸುತ್ತಿದ್ದರು ಎಂಬ ಅಭಿಪ್ರಾಯಗಳನ್ನು ವಿದ್ವಾಂಸರು ಹೇಳುತ್ತಾರೆ. ಉದಾಹರಣೆಗೆ ಬೇಟೆಗೆ ಹೋಗುವ ಸಂದರ್ಭದಲ್ಲಿ ಬೇರೆಯವರಿಗೆ ಹೇಳಬೇಕೆನ್ನುವ ವಿಷಯ ಬಂದಾಗ ಬೇಟೆ ಹೊಡೆದುಕೊಂಡು ಹೊತ್ತು ತರುವ ಚಿತ್ರ ಬರೆದು ಬೇಟೆಯ ವಿಷಯವನ್ನು ತಿಳಿಸಿಕೊಡುತ್ತಿದ್ದರು ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ. ಮುಂದೆ ನಾಗರಿಕತೆ ಬೆಳೆದಂತೆ ಹಲವಾರು ರೀತಿಯಲ್ಲಿ ಕಲೆಯು ಬೆಳವಣಿಗೆ ಕಂಡಿರುವುದನ್ನು ನಾವು ನೋಡುತ್ತೇವೆ. ಆದಿಮಾನವನ ಚಿತ್ರಗಳು ನಮ್ಮ ಕಲಾ ಕ್ಷೇತ್ರಕ್ಕೆ ಉತ್ತಮ ನಿದರ್ಶನಗಳಾಗಿವೆ.

ಕಲೆಯು ಪ್ರಾಗೈತಿಹಾಸಿಕ ಕಾಲದಿಂದ ಇಲ್ಲಿಯವರೆಗೆ ಹಲವಾರು ರೀತಿಯಲ್ಲಿ ಬೆಳೆದು ಬಂದಿರುವುದು ಗಮನಿಸಬೇಕಾಗುತ್ತದೆ. ಇಂತಹ ಆದಿಮಾನವನ ಚಿತ್ರಗಳು ಪ್ರಪಂಚದ ಹಲವಾರು ಭಾಗಗಳಲ್ಲಿ ಕಂಡುಬರುತ್ತವೆ. ಸ್ಪೇನ್, ಫ್ರಾನ್ಸ್, ಆಸ್ಟ್ರೇಲಿಯಾ, ಅಮೆರಿಕಾ, ಶ್ರೀಲಂಕಾ, ಭಾರತ, ಇಂಡೋನೇಶಿಯಾ ಹೀಗೆ ಅನೇಕ ದೇಶಗಳಲ್ಲಿ ಕಂಡುಬರುತ್ತವೆ. ಭಾರತಕ್ಕೆ ಬಂದಾಗ ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ, ಕೇರಳ, ಮಧ್ಯಪ್ರದೇಶ, ಮಹಾರಾಷ್ಟ್ರ ವಿವಿಧ ಭಾಗಗಳಲ್ಲಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಬಾದಾಮಿ, ಕೊಪ್ಪಳ, ರಾಮದುರ್ಗ, ರಾಯಚೂರ, ಚಿತ್ರದುರ್ಗ ಹಲವಾರು ಜಿಲ್ಲೆಗಳಲ್ಲಿ ಕಂಡುಬಂದಿವೆ. ಆದರೆ ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಾಗೈತಿಹಾಸಿಕ ಚಿತ್ರಗಳು ಕಂಡುಬರುತ್ತವೆ. ಇಂತಹ ಚಿತ್ರಗಳಿಂದ ಕಲಾ ಕ್ಷೇತ್ರದಲ್ಲಿ ಬದಲಾವಣೆಯನ್ನು ಕಂಡಿತು.

ಭಾರತೀಯ ಸಂಸ್ಕೃತಿಯನ್ನು ಬಿಚ್ಚಿ ತೋರಿಸುವ ಜವಾಬ್ದಾರಿ ಭಾರತೀಯ ಲಲಿತಕಲೆಗಳ ಮೇಲಿದೆ. ಲಲಿತ ಕಲೆಗಳಲ್ಲಿ ಪ್ರಮುಖವಾದವುಗಳು ಚಿತ್ರಕಲೆ, ಶಿಲ್ಪಕಲೆ, ಸಂಗೀತ, ನಾಟಕ, ಸಾಹಿತ್ಯ ಹಲವಾರು ರೀತಿಯಲ್ಲಿ ಲಲಿತಕಲೆಗಳು ಬೆಳೆದು ಬಂದಿವೆ. ಇದರಲ್ಲಿ ಚಿತ್ರ ಮತ್ತು ಶಿಲ್ಪಕಲೆಗಳು ಆದಿಮಾನವನ ಕಾಲದಿಂದ ಬೆಳೆದು ಬಂದಿವೆ ಎಂದು ಹೇಳುವಲ್ಲಿ ಸಂದೇಹವೇ ಇಲ್ಲ. ಚಿತ್ರಕಲೆಯು ಬಹು ಪ್ರಾಚೀನ ಎಂಬುದರ ಉಲ್ಲೇಖಗಳು ಹಲವಾರು ಪ್ರಾಚೀನ ಗ್ರಂಥಗಳಲ್ಲಿ ಮತ್ತು ಪುರಾಣಗಳಲ್ಲಿ ದೊರೆತಿವೆ. ಭಾರತೀಯ ಚಿತ್ರಕಲೆಯ ಮೇಲೆ ಕಾವ್ಯಗಳು ವಿಶ್ವಕೋಶ ಮಾದರಿಯ ಗ್ರಂಥಗಳು ರಚನೆಗೊಂಡಿವೆ. ಆದಿಮಾನವನು ವಾಸ್ತವ ಬದುಕಿಗೆ ಕಾಲಿಡುತ್ತಿದ್ದಂತೆ ಚಿತ್ರಕಲೆಯೂ ವಿವಿಧ ಕಾಲಘಟ್ಟಗಳಲ್ಲಿ ಧರ್ಮನಿಷ್ಠೆ ಜನಾಂಗ ನಿಷ್ಠೆ ವೈಶಿಷ್ಟ್ಯಗಳನ್ನು ಹೊಂದಿ ರಾಜಾಶ್ರಯಗಳಲ್ಲಿ ವಿವಿಧ ಧರ್ಮಗಳ ಧಾರ್ಮಿಕ ಹಿನ್ನೆಲೆಯಲ್ಲಿ ಕಾಣಿಸಿಕೊಂಡಿತು. ಈ ಹಂತದಲ್ಲಿ ಹಲವಾರು ಗುಹಾಂತರ ದೇವಾಲಯಗಳಲ್ಲಿ ಮನೆ–ಮಠಗಳಲ್ಲಿ ಧರ್ಮದ ಹಿನ್ನೆಲೆಯಲ್ಲಿ ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಪಟ ಚಿತ್ರಗಳು ಹಲವಾರು ಶಿಲ್ಪಗಳು ರಚನೆಯಾಗಿರುವುದು ಕಂಡುಬರುತ್ತದೆ. ಕಲೆಯು ವಿವಿಧ ಕಾಲಘಟ್ಟಗಳಲ್ಲಿ, ವಿವಿಧ ಹೆಸರುಗಳಿಂದ ಕರೆಸಿಕೊಂಡಿತು. ಪಲ್ಲವರ ಕಾಲದಲ್ಲಿ ಪಲ್ಲವ ಶೈಲಿ, ರಾಷ್ಟ್ರಕೂಟರ ಕಾಲದಲ್ಲಿ ರಾಷ್ಟ್ರಕೂಟರ ಶೈಲಿ ಚೋಳ, ಚಾಲುಕ್ಯ, ಹೊಯ್ಸಳ, ವಿಜಯನಗರ ಶೈಲಿ ಹೀಗೆ ಹಲವಾರು ಹೆಸರುಗಳಿಂದ

ಕರೆಸಿಕೊಂಡಿತು. ವಿಜಯನಗರದ ಪತನದ ನಂತರ ಕೆಲವು ರಾಜವಂಶಗಳು ಈ ಕಲೆಯನ್ನು ಪೋಷಿಸಿದವು. ಇಲ್ಲಿ ಮೈಸೂರು ಚಿತ್ರಕಲೆ, ಸುರಪುರ ಚಿತ್ರಕಲೆ, ಕರಾವಳಿ ಕಾವಿಕಲೆ, ಬಂಗಾಳ ಕಲೆ ಹೀಗೆ ಹಲವಾರು ರೀತಿಯಲ್ಲಿ ನಾನಾ ಹೆಸರುಗಳಿಂದ ಕರೆಸಿಕೊಂಡಿತು. ಮುಂದೆ ೧೮ನೇ ಶತಮಾನದ ವೇಳೆಗೆ ಬ್ರಿಟೀಷರ ಆಗಮನದಿಂದ ಭಾರತೀಯ ಕಲೆಯು ರಾಜಾಶ್ರಯ ತಪ್ಪಿತು. ನಂತರದಲ್ಲಿ ಹಲವಾರು ಕಲಾ ಗುಂಪುಗಳು ಹುಟ್ಟಿಕೊಂಡವು. ಕಲೆಯನ್ನು ವಿವಿಧ ರೀತಿಯಲ್ಲಿ ಬದಲಾವಣೆಗಳನ್ನು ಮಾಡಿದರು. ಹೀಗೆ ಕಲೆಯು ವಿವಿಧ ರೀತಿಯಲ್ಲಿ ಧಾರ್ಮಿಕ ಮತ್ತು ಐತಿಹಾಸಿಕ ಹಿನ್ನೆಲೆಯಲ್ಲಿ ಬೆಳೆದು ಬಂದಿರುವುದು ಗೋಚರವಾಗುತ್ತದೆ.

ಚಿತ್ರ ಮತ್ತು ಶಿಲ್ಪಕಲೆಗಳನ್ನು ಧಾರ್ಮಿಕ ಹಿನ್ನೆಲೆಯಲ್ಲಿ ನೋಡಿದಾಗ ಹಲವಾರು ರೀತಿಯ ಬದಲಾವಣೆಗಳು ನಮಗೆ ಗೋಚರವಾಗುತ್ತವೆ. ಧಾರ್ಮಿಕವಾಗಿ ಕಲೆಯನ್ನು ನೋಡಿದಾಗ ಇಲ್ಲಿ ದೇವರು, ದೇವತೆಯರು, ಕಿಂಪುರುಷರು ಈ ರೀತಿಯಾದ ಕಲ್ಪನೆ ಹುಟ್ಟುತ್ತವೆ. ಆದರೆ ದೇವರು ಎನ್ನುವ ಕಲ್ಪನೆ ಬಂದಿರುವುದು ಮಾನವನು ನಾನು ಎಲ್ಲಿಂದ ಬಂದಿದ್ದೇನೆ? ಏನು ಮಾಡುತ್ತೇನೆ? ಎಲ್ಲಿಗೆ ಹೋಗುತ್ತೇನೆ? ಎಂಬ ಇಂತಹ ಹಲವಾರು ವಿಚಾರಗಳೇ ದೇವರ ಕಲ್ಪನೆಯಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಕಲ್ಪನೆಯನ್ನು ಕಲಾವಿದರು ವಿವಿಧ ಮಾಧ್ಯಮಗಳಲ್ಲಿ ರೂಪ ಕೊಡುವುದಕ್ಕೆ ಪ್ರಾರಂಭಿಸಿದ. ಅಂದಿನಿಂದ ದೇವರಿಗೆ ಒಂದು ರೂಪ ಬಂದಿತು. ಮಾನವನ ಮನಸ್ಸು ವಿಕರ್ಷಿಸುತ್ತಿದ್ದಂತೆ ವಿವಿಧ ದೇವರುಗಳಿಗೆ ರೂಪ ಕೊಡುವುದಕ್ಕೆ ಪ್ರಾರಂಭಿಸಿದ. ಶಿವ, ಪಾರ್ವತಿ, ಬ್ರಹ್ಮ, ವಿಷ್ಣು, ಸರಸ್ವತಿ, ಲಕ್ಷ್ಮೀ, ಗಣಪತಿ, ಆಂಜನೇಯ ಹೀಗೆ ಹಲವಾರು ಕಲ್ಪನೆಗಳನ್ನು ಕೊಟ್ಟು ದೇವರನ್ನು ಸೃಷ್ಟಿಸಿದ. ಮುಂದೆ ವಿವಿಧ ಜನಾಂಗಗಳು ದೇವರುಗಳನ್ನು ಆರಾಧಿಸುತ್ತಾ ಬಂದಿರುವುದನ್ನು ನಾವು ನೋಡುತ್ತೇವೆ. ಆದರೆ ಕೆಲವು ದೇವರುಗಳಿಗೆ ಬಾಹ್ಯ ಪ್ರಪಂಚದಲ್ಲಿ ಇರದೇ ಇರುವ ವಿಚಿತ್ರ ರೂಪಕೊಟ್ಟು ದೇವರನ್ನು ಸೃಷ್ಟಿಸಿದ. ಉದಾಹರಣೆಗೆ ಗಣಪತಿ, ವಿಷ್ಣುವಿನ ಅವತಾರಗಳೂ ಹದಿನೆಂಟು ಕೈಗಳ ನಟರಾಜ. ಪ್ರಾಣಿಯ ಮುಖ ಮನುಷ್ಯ ದೇಹ, ಮನುಷ್ಯ ಮುಖ ಪ್ರಾಣಿಯ ದೇಹ ಹೀಗೆ ಹಲವಾರು ರೀತಿಯ ಕಲ್ಪನೆಗಳನ್ನು ಕೊಟ್ಟು ಸೃಷ್ಟಿಸಿದ. ಇದರಲ್ಲಿ ಗಣಪತಿಯು ಕಲಾವಿದನ ಸೃಜನಶೀಲತೆಯನ್ನು ಮೀರಿ ವಿವಿಧ ಭಂಗಿ, ಆಕಾರಗಳಲ್ಲಿ ಸೃಷ್ಟಿಯಾಗುತ್ತಿರುವುದನ್ನು ಕಾಣಬಹುದಾಗಿದೆ. ಗಣಪತಿಯಲ್ಲಿ ಒಂದು ವಿಶೇಷತೆ ಇದೆ. ಗಣೇಶನು ಮಾನವರ ದೇಹವನ್ನು ಹೊಂದಿದ್ದರೂ ಮುಖ ಮಾತ್ರ ಪ್ರಾಣಿಯದ್ದು, ಆದರೆ ಮನುಷ್ಯನಿಗೆ ಪ್ರಾಣಿಯ ಮುಖ ಇರುತ್ತದೆಯೇ ಎಂದು ಪ್ರಶ್ನಿಸಿದಾಗ ಹಲವಾರು ಸಾಹಿತ್ಯ ಗ್ರಂಥಗಳು ಗಣೇಶನ ಹುಟ್ಟಿನ ಬಗೆಗೆ ಹೇಳುತ್ತವೆ. ಆದರೆ ಗಣೇಶನು ಪುರುಷ ರೂಪದಲ್ಲಿ ಇದ್ದಾನೆಂದು ಎಲ್ಲರ ನಂಬಿಕೆ. ಆದರೆ ಶತಮಾನಗಳ ಹಿಂದೆಯೇ ಸ್ತ್ರೀ ರೂಪದಲ್ಲೂ ಕಂಡಿರಿಸಲಾಗಿದೆ. ಅಲ್ಲಿ ಗಣೇಶಾನಿ ವಿನಾಯಕಿ, ಗಣೇಶಿನಿ, ವಿಘ್ನೇಶ್ವರಿ, ಗಣೇಶ್ವರಿ ಇತ್ಯಾದಿ ಹೆಸರುಗಳಲ್ಲಿ ಗಣೇಶನ ಸ್ತ್ರೀ ರೂಪ ವಿಗ್ರಹಗಳನ್ನು ಇಂದಿಗೂ ಕಾಣಬಹುದು.[೧]

---

೧. ವಾರ ಪತ್ರಿಕೆ **ತರಂಗ,** ೮ ಸೆಪ್ಟಂಬರ್ ೨೦೧೧ ಕೇಶವ ಕುಡ್ಲ ಅವರ ಲೇಖನ–ಪು–೧೦

**ಅಧ್ಯಯನದ ಉದ್ದೇಶ :**

ಗಣೇಶ ಮನುಷ್ಯ ಲೋಕ ಮತ್ತು ಪ್ರಾಣಿ ಲೋಕವನ್ನು ತನ್ನೊಳಗೆ ಮೇಳೈಸಿಕೊಂಡು ವಿಶಿಷ್ಟ ದೇವನಾಗಿದ್ದಾನೆ. ಗಣೇಶ ಕಲಾವಿದರ ಕಲ್ಪನೆಯಲ್ಲಿ ಅರಳಿದ ಕುತೂಹಲಕಾರಿ ದೇವನಾಗಿದ್ದಾನೆ ಎಂದು ಕಲಾ ಲೋಕಕ್ಕೆ ತೋರಿಸುವ ಉದ್ದೇಶವಾಗಿದೆ. ಗಣೇಶನು ಯಾವ ಯಾವ ಮೂಲಗಳಿಂದ ಮತ್ತು ಯಾವ ಯಾವ ಮಾಧ್ಯಮಗಳಲ್ಲಿ ರಚನೆಯಾಗಿದ್ದಾನೆಂದು ಅಧ್ಯಯನ ಮಾಡಲಾಗಿದೆ. ಗಣೇಶನು ಯಾವ ಯಾವ ಕಾಲಘಟ್ಟಗಳಲ್ಲಿ ಕಲಾವಿದರ ಕಲ್ಪನೆಯಲ್ಲಿ ಅರಳಿದ ಬಗೆಯನ್ನು ಹಲವಾರು ಕಲಾವಿದರು ಕಲಾಕೃತಿಗಳನ್ನು ರಚಿಸಿದ್ದಾರೆ. ಅಂತಹ ಕಲಾವಿದರ ಪರಿಚಯ ಮತ್ತು ಕಲಾಕೃತಿಗಳನ್ನು ಕಲಾ ಲೋಕಕ್ಕೆ ಪರಿಚಯಿಸಲಾಗಿದೆ. ಈ ಸಮಕಾಲಿನ ಸಂದರ್ಭದಲ್ಲಿ ಇನ್ನೂ ಈ ವೈವಿದ್ಯತೆ ಗರಿಗೆದರಿ ನಿಂತಿದೆ. ಈಗ ತರಕಾರಿ ಮತ್ತು ಹಣ್ಣುಗಳಿಂದ, ಕಬ್ಬಿಣದ ಬಿಡಿಭಾಗಗಳಿಂದ, ವಾಹನಗಳ ಬಿಡಿಭಾಗಗಳು, ದವಸ ದಾನ್ಯಗಳು, ಗಾಜಿನ ತ್ಯಾಜ್ಯ ವಸ್ತುಗಳು, ರಂಗವಲ್ಲಿಯ ವರ್ಣ ವೈವಿದ್ಯತೆ, ತೆಂಗಿನ ನಾರುಗಳು ಇತ್ಯಾದಿ ವಸ್ತುಗಳಿಂದ ಗಣೇಶನ ಮೂರ್ತಿಗಳು ಸಿದ್ಧಗೊಳ್ಳುತ್ತಿವೆ. ಇದಲ್ಲದೇ ಜಲವರ್ಣ, ಆಕ್ರೇಲಿಕ್, ತೈಲವರ್ಣ, ಟೆಂಪರಾ, ಶೀಸದ ಕಡ್ಡಿ, ಚಾರ್‌ಕೋಲ್ ಚಿತ್ರಕಲೆಗೆ ಸಂಬಂಧಿಸಿದ ಮಾಧ್ಯಮಗಳಲ್ಲಿ ರಚನೆಯಾಗುತ್ತಿರುವುದನ್ನು ಅಧ್ಯಯನ ಮಾಡುವ ಉದ್ದೇಶವಾಗಿದೆ. ಹಲವಾರು ಕಲೆಗಳು ಅಧ್ಯಯನಕ್ಕೆ ಅನುಕೂಲವಾಗುತ್ತದೆ. ಇದರ ಜೊತೆಗೆ ಹಲವಾರು ಕಲೆಗಳ ವಿಷಯಗಳನ್ನು ಅನಾವರಣಗೊಳಿಸಲಾಗಿದೆ. ಇಂತಹ ಕಲೆಗಳ ಅಧ್ಯಯನ ಮಾಡುವುದರಿಂದ ಧಾರ್ಮಿಕ, ಐತಿಹಾಸಿಕ, ಜಾನಪದ ಕಲೆಗಳ ಬಗೆಗೆ ತಿಳಿದುಕೊಳ್ಳಬಹುದಾಗಿದೆ. ಮತ್ತು ನಮ್ಮ ಅಧ್ಯಯನದಲ್ಲಿ ವಿವಿಧ ಪುರಾಣಗಳೂ, ವೇದಗಳೂ, ಉಪನಿಷತ್ತುಗಳನ್ನು ಅಧ್ಯಯನ ಮಾಡುವ ಉದ್ದೇಶವಾಗಿದೆ. ಮತ್ತು ಕಲಾವಿದನ ಸೃಜನಶೀಲತೆಯನ್ನು ಗುರುತಿಸಲಾಗಿದೆ. ಪ್ರಸ್ತುತ ಅಧ್ಯಯನ ವಿಷಯವು ದೃಶ್ಯಕಲೆಯಲ್ಲಿ ಗಣೇಶವಾದ್ದರಿಂದ ಎಲ್ಲ ಕಲೆಗಳ ಬಗೆಗೆ ಅಧ್ಯಯನ ಮಾಡುವ ಉದ್ದೇಶವಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ನಡೆದ ಅಧ್ಯಯನಗಳು**

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ॥ ಎಸ್.ಸಿ.ಪಾಟೀಲ್‌ರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ: ಒಂದು ಅಧ್ಯಯನ**[೧] ಎಂಬ ಸಂಶೋಧನ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನವಾಗಿದೆ. ೧೯೮೭ರಲ್ಲಿ ಡಾ. ಬಿ.ಕೆ.ಹಿರೇಮಠರವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**[೨] ಎಂಬ ಪಿಹೆಚ್.ಡಿ ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳನ್ನು ಮೀಸಲಾಗಿಟ್ಟು ಅಧ್ಯಯನ ಮಾಡಿದ್ದಾರೆ. ಇದರ ನಂತರ

೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ ಮಹಾಪ್ರಬಂಧ **ಕರ್ನಾಟಕದ ಜನಪದ ಚಿತ್ರಕಲೆ**[೩] ಈ ಮಹಾಪ್ರಬಂಧವನ್ನು ಡಾ. ಎಸ್.ಸಿ.ಪಾಟೀಲ್‌ರು ಸಿದ್ಧಪಡಿಸಿದ್ದು, ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ.ಲ.ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು**[೪] ೧೯೯೭ರಲ್ಲಿ ಡಾ. ಸಂಪದಾ ಭಟ್ಟ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು**[೫] ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೭ರಲ್ಲಿ ಡಾ. ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ. ನಿಕೋಲಸ್ ರೋರಿಕ್: ಜೀವನ ಮತ್ತು ಕಲಾಕೃತಿಗಳು**[೬] ೨೦೦೦ರಲ್ಲಿ ಡಾ. ಯಾದಪ್ಪಾ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ**[೭] ೨೦೦೨ರಲ್ಲಿ ಡಾ. ಶಿವಾನಂದ ಎಚ್. ಬಂಟನೂರ ಇವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ**[೮] ೨೦೦೨ರಲ್ಲಿ ಡಾ. ಗಿರೀಶ ಅವರ **ಬುಡಕಟ್ಟು ಚಿತ್ರಕಲೆ**[೯] ೨೦೦೨ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿಯವರ ಕಲಾವಿದ **ಎಂ.ಎ.ಚಟ್ಟಿಯವರ ಜೀವನ, ಕಲಾಕೃತಿಗಳು ಒಂದು ಅಧ್ಯಯನ**[೧೦]

೨೦೦೨ರಲ್ಲಿ ಶರಣಪ್ಪಾ ಕೋಲ್ಕಾರ ಅವರ **ಕೊಪ್ಪಳ – ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ**[೧೧] ೨೦೦೨ರಲ್ಲಿ ಡಾ. ಸೌಮ್ಯ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್‌ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್**[೧೨] ೨೦೦೨ರಲ್ಲಿ ಡಾ. ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಆಂಡ್ ಕಲರ್ ಎಕ್ಸಪೋಜಿಸ್ ಆಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಆಂಡ್ ಕಾಂಟೆಂಪರರಿ ಪೇಂಟಿಂಗ್**[೧೩] ೨೦೦೩ರಲ್ಲಿ ಡಾ. ವೀಣಾ ಶೇಖರ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦–೧೮೨೦)**[೧೪] ೨೦೦೩ರಲ್ಲಿ ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,**[೧೫] ೨೦೦೩ರಲ್ಲಿ ಡಾ. ಎಸ್.ಸಿ.ಪಾಟೀಲ್‌ರು ಕರ್ನಾಟಕ ವಿ.ವಿ ಗೆ ಮಂಡಿಸಿದ **ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೇಷಲ್ ರೆಫೆರೆನ್ಸ ಟು ಡ್ರಾಯಿಂಗ್ ಆಂಡ್ ಪೇಂಟಿಂಗ್**[೧೬] ೨೦೦೪ರಲ್ಲಿ ಡಾ. ವಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ (೧೪೦೦–೧೮೦೦)**[೧೭] ೨೦೦೪ರಲ್ಲಿ ಡಾ. ಶಿವಕುಮಾರ ಎ.ಓ ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು**[೧೮] ೨೦೦೫ರಲ್ಲಿ ಡಾ. ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗುಲುಗೊಂಬೆ ಚಿತ್ರಕಲೆ**[೧೯] ೨೦೦೫ರಲ್ಲಿ ಡಾ. ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ**[೨೦] ೨೦೦೫ರಲ್ಲಿ ಡಾ॥ ಎಚ್.ಎನ್.ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ**[೨೧] ೨೦೦೫ರಲ್ಲಿ ಡಾ॥ ಎಸ್.ವ್ಹಿ.ವೆಂಕಟೇಶಯ್ಯಾ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತುವ ಅಂಶಗಳು**

**ಒಂದು ಅಧ್ಯಯನ**[೨೨] ೨೦೦೬ರಲ್ಲಿ ಡಾ. ವಿಶ್ವೇಶ್ವರಿ ತೀವಾರಿ ಅವರ **ರಂಗೋಲಿ ಚಿತ್ರಕಲೆ**[೨೩] ೨೦೦೭ರಲ್ಲಿ ಡಾ॥ ಗೀತಾಂಜಲಿ ಬಿ.ಆರ್ ಅವರ **ಕರ್ನಾಟಕದ ಐತಿಹಾಸಿಕ ದೀಪಸ್ಥಂಭಗಳು ಮೈಸೂರು ಪ್ರದೇಶವನ್ನು ಅನುಲಕ್ಷಿಸಿ ಒಂದು ಅಧ್ಯಯನ**[೨೪] ಹಾಗೂ ೨೦೦೭ರಲ್ಲಿಯೇ ಬಂದ ಡಾ. ಎಮ್.ಸಿ.ಬಾಗೋಡಿಯವರ **ಸುರಪುರ ಶೈಲಿಯ ಚಿತ್ರಕಲೆ**[೨೫] ಇವು ಚಿತ್ರಕಲೆಯ ಕುರಿತು ಬಂದ ಪಿಹೆಚ್.ಡಿ ಮಹಾಪ್ರಬಂಧಗಳು. ೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ**[೨೬] ೨೦೦೫ರಲ್ಲಿ ಡಾ. ಡಿ.ಎ.ಉಪಾಧ್ಯಾ ಅವರ **ದೃಶ್ಯಕಲೆಗಳ ತೌಲನಿಕ ಅಧ್ಯಯನ**[೨೭] ಡಿ.ಲಿಟ್. ಮಹಾಪ್ರಬಂಧಗಳಾಗಿವೆ

**ಎಂ.ಫಿಲ್. ಪ್ರಬಂಧಗಳು**

೨೦೦೨ರಲ್ಲಿ ಮಲ್ಲಿಕಾರ್ಜುನ.ಸಿ.ಬಾಗೋಡಿಯವರು ಎಂ.ಫಿಲ್ ಪದವಿಗಾಗಿ ಮಂಡಿಸಿದ 'ಚಿತ್ರಕಲಾವಿದ ಜೆ.ಎಸ್.ಖಂಡೇರಾವ್: ಒಂದು ಅಧ್ಯಯನ',[೩೪] ೨೦೦೩ರಲ್ಲಿ ಎ.ಎಸ್. ವಿಶ್ವನಾಥ ಅವರ 'ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು',[೩೫] ೨೦೦೫ರಲ್ಲಿ ಶಂಕರಪ್ಪ ಎಂ. ಕುಂದಗೋಳ ಅವರ 'ಕಲಾವಿದ ಡಿ.ವಿ. ಹಾಲಬಾವಿರವರ ಬದುಕು ಮತ್ತು ಕಲಾಕೃತಿಗಳು',[೩೬] ಸಿ.ಡಿ. ಜಟ್ಟೆಣ್ಣವರ ಅವರ 'ಕಲಾವಿದ ಡಾ. ಎಂ.ವಿ. ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು'[೩೭] ೨೦೦೬ರಲ್ಲಿ ಸುಚಿತ್ರಾ ಗ. ಲಿಂಗದಳ್ಳಿ ಅವರ 'ವಿಜಯನಗರದ ಭಿತ್ತಿ ಚಿತ್ರಕಲೆ:[೩೮] ಒಂದು ಅಧ್ಯಯನ', ರವಿ ನಾಯಕ ಅವರ 'ಕಿನ್ನಾಳ ಕಲೆ: ಒಂದು ಅಧ್ಯಯನ',[೩೯] ೨೦೦೭ರಲ್ಲಿ ಬಿ.ಎಮ್. ಪಾಟೀಲ ಅವರ 'ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಗಳು',[೪೦] ಶೈಲಾ ಬರಡೋಲ ಅವರ 'ಸಂತ ಕಲಾವಿದ ಸುಬ್ಬರಾಯರ ಜೀವನ ಮತ್ತು ಕಲಾಕೃತಿಗಳು',[೪೧] ಉಮೇಶ ಎಸ್. ಅವರ 'ಕರ್ನಾಟಕ ಜೈನ ಚಿತ್ರಕಲೆ',[೪೨] ಶಶಿಕಾಂತ ಬಸರಿಕಟ್ಟಿ ಅವರ 'ಕಲಘಟಗಿ ಚಿತ್ರಕಲೆ',[೪೩] ಮಹಾಂತೇಶ ಪಲ್ಲದಿನ್ನಿ ಅವರ 'ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು',[೪೪] ಮಹಾಕೂಟೇಶ್ವಗೌಡ ಪಾಟೀಲ ಅವರ 'ಬೆಳಗಾವಿ ಜಿಲ್ಲೆಯ ಚಿತ್ರಕಲೆ',[೪೫] ಕೃಷ್ಣೇಗೌಡ ಅವರ 'ಕರ್ನಾಟಕದ ಟಿಬೇಟಿಯನ್ನರ ಚಿತ್ರಕಲೆ',[೪೬] ಸುರೇಶ ಬಡಿಗೇರ ಅವರ 'ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಗಳ ಅಧ್ಯಯನ',[೪೭] ಗಿರಿಜಾ ಬಿರಾದಾರ ಅವರ 'ವಿಜಾಪುರ ಜಿಲ್ಲೆಯ ಚಿತ್ರಕಲೆ',[೪೮] ಮಹೇಶ ಉಮತಾರ ಅವರ 'ಬಿ.ಪಿ. ಬಾಯಿರಿ–ಕಲೆ ಮತ್ತು ಕಲಾ ಸಾಹಿತ್ಯ',[೪೯] ಕೃಷ್ಣವೇಣಿ ಅವರ 'ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ',[೫೦] ಸಂತೋಷಕುಮಾರ ಕುಲಕರ್ಣಿ ಅವರ 'ದಾವಣಗೆರೆ ಜಿಲ್ಲೆಯ ಚಿತ್ರಕಲೆ',[೫೧] ಯೋಗೀಶ ಎಚ್. ಅವರ'ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ',[೫೨] ಬಸವರಾಜ ಗವಿಮಠ ಅವರ 'ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ',[೫೩] ಜಯರಾಜ ಚಿಕ್ಕಪಾಟೀಲ ಅವರ 'ಕರ್ನಾಟಕದ ಜಾಹೀರಾತುಗಳಲ್ಲಿ ಸಾಂಸ್ಕೃತಿಕ ನೆಲೆಗಳು',[೫೪] ೨೦೦೯ರಲ್ಲಿ 'ಸಿಬಿ ದೇವಾಲಯದ ಭಿತ್ತಿ ಚಿತ್ರಕಲೆ',[೫೫] ರಂಗಸ್ವಾಮಿ 'ಆಲುಮೇಕರ ಅವರ ಕಲಾ ಬದುಕು',[೫೬] ವಿಶ್ವನಾಥರವರ

‘ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ’,[೫೭] ೨೦೧೦ರಲ್ಲಿ ವಾದಿರಾಜ ಅವರ ‘ಎಲ್. ಶಿವಲಿಂಗಪ್ಪನವರ ‘ಜೀವನ ಮತ್ತು ಕಲಾಕೃತಿಗಳು’,[೫೮] ಭಾನುಮತಿ ಕೆ.ಎಲ್. ಅವರ ‘ಕಲಾವಿದ ಎಂ.ಜಿ. ವಾಚೇದಮಠ ಜೀವನ ಮತ್ತು ಕಲಾಕೃತಿಗಳು’,[೫೯] ದಿನೇಶ ಅವರ ‘ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು’[೬೦] ಚಿಂತಾಮಣಿ ಅವರ ‘ಭಿತ್ತಿ ಚಿತ್ರಗಳಲ್ಲಿ ದಶಾವತಾರಗಳು’[೬೧] ಈ ಎಂ.ಫಿಲ್ ಪ್ರಬಂಧಗಳು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿರುತ್ತವೆ.

**ಸ್ವರೂಪ**

ದೃಶ್ಯಕಲೆಯಲ್ಲಿ ಗಣೇಶ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ಪ್ರಸ್ತುತ ಅಧ್ಯಯನವನ್ನು ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸುವ ವಿಷಯಗಳ ಕುರಿತಾದ ಸಂಕ್ಷಿಪ್ತ ಸ್ವರೂಪದ ವಿವರಗಳನ್ನು ನೀಡಲಾಗಿದೆ.

**ಅಧ್ಯಾಯ ಒಂದ**ರಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ ವಿಷಯವನ್ನು ಆಯ್ಕೆ ಮಾಡಿಕೊಂಡಿರುವ ಉದ್ದೇಶ ಮತ್ತು ಪ್ರತಿಯೊಂದು ಅಧ್ಯಾಯದ ಸ್ವರೂಪ, ವಿಷಯದ ವ್ಯಾಪ್ತಿ ಮತ್ತು ಅದರ ವೈಧಾನಿಕತೆಯ ಮೂಲ ಮತ್ತು ಆನುಷಂಗಿಕ ಆಕರಗಳ ಮಾಹಿತಿಯನ್ನು ನೀಡಲಾಗಿದೆ.

**ಅಧ್ಯಾಯ ಎರಡ**ರಲ್ಲಿ ಐತಿಹಾಸಿಕ ಹಿನ್ನೆಲೆ ಹಾಗೂ ದೃಶ್ಯಕಲೆಗಳ ವೈವಿಧ್ಯತೆ ಮತ್ತು ಹರವು ಆಯ್ಕೆ ಮಾಡಿಕೊಂಡಿರುವ ವಿಷಯವು ದೃಶ್ಯಕಲೆಯಲ್ಲಿ ಗಣೇಶವಾದ್ದರಿಂದ ಗಣೇಶನ ಉಲ್ಲೇಖಗಳನ್ನು ಹೊಂದಿದ ವಿವಿಧ ಸಾಹಿತ್ಯ ಕೃತಿಗಳು, ವೇದಗಳು, ಉಪನಿಷತ್ತುಗಳು ಹಾಗೂ ಗಣೇಶನ ಹುಟ್ಟಿನ ಬಗೆಗೆ ಕಥೆಗಳನ್ನು ಹೇಳುವ ಪುರಾಣಗಳ ಅಧ್ಯಯನ ಮಾಡಲಾಗಿದೆ. ಮುಂದುವರೆದು ದೃಶ್ಯಕಲೆಗಳ ವೈವಿಧ್ಯತೆ ಮತ್ತು ಹರವನ್ನು ಒಳಗೊಂಡಿದೆ.

**ಅಧ್ಯಾಯ ಮೂರ**ರಲ್ಲಿ ಮಣ್ಣಿನ ಮಾಧ್ಯಮದಲ್ಲಿ ರಚನೆಯಾದ ಗಣೇಶನ ಶಿಲ್ಪಗಳು ಅವುಗಳ ಅಳತೆ, ತಂತ್ರಶೈಲಿ, ಮಣ್ಣಿನ ಶಿಲ್ಪದ ಸಾಹಿತ್ಯಿಕ ಹಿನ್ನೆಲೆ ಮತ್ತು ಸಾಂಪ್ರದಾಯಕ ಹಿನ್ನೆಲೆಯಲ್ಲಿ ಹಾಗೂ ಆಧುನಿಕ ಶೈಲಿಯಲ್ಲಿ ರಚನೆಯಾದ ಶಿಲ್ಪಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ನಾಲ್ಕ**ರಲ್ಲಿ ಶಿಲಾ ಮಾಧ್ಯಮದಲ್ಲಿ ರಚನೆಯಾದ ಗಣೇಶನ ಶಿಲ್ಪಗಳ ರಚನಾ ವಿಧಾನ, ಕಾಲಮಾನ ಶೈಲಿ ಮತ್ತು ಕಲಾಕೃತಿಗಳ ಹಿನ್ನೆಲೆಯನ್ನು ತಿಳಿಸಲಾಗಿದೆ.

**ಅಧ್ಯಾಯ ಐದ**ರಲ್ಲಿ ಭಿತ್ತಿಚಿತ್ರ ಮಾಧ್ಯಮದಲ್ಲಿ ರಚನೆಯಾದ ಗಣೇಶನ ಚಿತ್ರಗಳು ಮತ್ತು ಆಧುನಿಕ ಸಂದರ್ಭದಲ್ಲಿ ರಚನೆಯಾಗುತ್ತಿರುವ ಚಿತ್ರ–ಶಿಲ್ಪಗಳ ಬಗೆಗೆ ಸ್ಥೂಲವಾದ ಮಾಹಿತಿಯನ್ನು ಒಳಗೊಂಡಿದೆ.

**ಅಧ್ಯಾಯ ಆರ**ರಲ್ಲಿ ಕಟ್ಟಿಗೆಯಲ್ಲಿ ರಚನೆಯಾದ ಗಣೇಶನ ಶಿಲ್ಪಗಳ ಬಗ್ಗೆ ವಿವರಿಸಲಾಗಿದೆ. ಇಲ್ಲಿ ದೇಗುಲಗಳ ರಥಗಳಲ್ಲಾಗಿರಬಹುದು, ಬಾಗಿಲುಗಳ ಪಟ್ಟಿಕೆಗಳಲ್ಲಾಗಿರಬಹುದು, ಇತರೆ ಕಟ್ಟಿಗೆಯ ಸಾಮಾನುಗಳಲ್ಲಾಗಿರಬಹುದು, ಅವುಗಳ ತಂತ್ರ, ಶೈಲಿ ಅದರ ವಿಶೇಷತೆಗಳ ಬಗೆಗೆ ಹೇಳಲಾಗಿದೆ. ಇದರ ಜೊತೆಗೆ ಕಂಚು, ಕಬ್ಬಿಣ ಹಾಗೂ ಇತರ ಕಲೆಗಳಾದ ಗಂಜೀಪಾ, ಗಾಜಿನ ಚಿತ್ರಕಲೆ, ತ್ಯಾಜ್ಯ ವಸ್ತುಗಳನ್ನು ಬಳಸಿಕೊಂಡು ರಚನೆ ಮಾಡಿದ ಗಣೇಶನ ಚಿತ್ರ-ಶಿಲ್ಪಗಳ ಕುರಿತು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಏಳ**ರಲ್ಲಿ ಸಮಕಾಲಿನ ಸಂದರ್ಭದಲ್ಲಿ ಗಣೇಶೋತ್ಸವ ಆಚರಿಸುವ ರೀತಿ, ಬೆಳೆದುಬಂದ ಬಗೆ, ಪೂಜಾ ವಿಧಾನಗಳು, ಆಧುನಿಕ ಸಂದರ್ಭದಲ್ಲಿ ಕಲಾವಿದರ ಕೈಯಲ್ಲಿ ರಚನೆಗೊಳ್ಳುತ್ತಿರುವ ಗಣೇಶನ ಚಿತ್ರ-ಶಿಲ್ಪಗಳು ಮತ್ತು ಕೆಲವು ಕಲಾವಿದರ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಎಂಟ**ರಲ್ಲಿ ಎಲ್ಲ ಅಧ್ಯಾಯಗಳ ಫಲಿತಗಳ ಸಮಾರೋಪವಿರುತ್ತದೆ. ಜೊತೆಗೆ ಅಧ್ಯಯನದಲ್ಲಿ ಕಂಡುಕೊಂಡ ಹಲವಾರು ವಿಷಯಗಳ ಅನಿಸಿಕೆಗಳನ್ನು ಹೇಳಲಾಗಿದೆ.

## ವ್ಯಾಪ್ತಿ

ದೃಶ್ಯಕಲೆಯಲ್ಲಿ ಗಣೇಶ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಈ ಅಧ್ಯಯನವು ಉತ್ತರ ಕರ್ನಾಟಕಕ್ಕೆ ಮಾತ್ರ ಅನುಲಕ್ಷಿಸಿದೆ. ಇದರಲ್ಲಿ ಕಂಡುಬರುವ ಮಣ್ಣಿನ ಮಾಧ್ಯಮದ ಗಣೇಶ ಶಿಲ್ಪಗಳು, ಶಿಲಾ ಮಾಧ್ಯಮದ ಶಿಲ್ಪಗಳು, ಭಿತ್ತಿಚಿತ್ರ, ಶಿಲ್ಪಗಳು, ಕಟ್ಟಿಗೆ ಮಾಧ್ಯಮದ ಗಣೇಶನ ಶಿಲ್ಪಗಳು ಅದರ ಜೊತೆಗೆ ಇನ್ನಿತರ ಮಾಧ್ಯಮಗಳಲ್ಲಿ ರಚನೆಯಾದ ಚಿತ್ರ-ಶಿಲ್ಪಗಳು ಸಮಕಾಲಿನ ಸಂದರ್ಭದಲ್ಲಿ ಗಣೇಶ ಉತ್ಸವಕ್ಕೆ ರಚನೆಯಾಗುತ್ತಿರುವ ಕೆಲವು ಆಯ್ದ ಶಿಲ್ಪಗಳು. ಗಣೇಶ ಆಚರಣೆಗಳು ಕೆಲವು ಕಲಾವಿದರ ಕಲಾಕೃತಿಗಳು, ಕೆಲವೇ ಆಯ್ದ ನೆಲೆಗಳನ್ನು ಸಮೀಕ್ಷೆ ಮಾಡಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

## ವಿಧಾನ

ದೃಶ್ಯಕಲೆಯಲ್ಲಿ ಗಣೇಶ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಅಧ್ಯಯನ ಮಾಡುವ ವಿಧಾನವಾಗಿದೆ. ಈ ಅಧ್ಯಯನದಲ್ಲಿ ಮೂಲ ಆಕರ ಸಾಮಗ್ರಿ ಮತ್ತು ಆನುಷಂಗಿಕ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ. ಮತ್ತು ವಿಷಯಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಬಳಸಿಕೊಳ್ಳಲಾಗಿದೆ.

## ಮೂಲ ಆಕರ ಸಾಮಗ್ರಿ

ಮೂಲ ಆಕರ ಸಾಮಗ್ರಿಯಲ್ಲಿ ಪ್ರಥಮವಾಗಿರುವುದು ಕ್ಷೇತ್ರಕಾರ್ಯ ಮತ್ತು ಆ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ವಿಷಯಗಳನ್ನು ತಿಳಿದುಕೊಂಡವರ ಸಂದರ್ಶನ ಮತ್ತು ಕಲಾಕೃತಿಗಳ ಆಯ್ದ ಛಾಯಾಚಿತ್ರಗಳು ಇವೆಲ್ಲವುಗಳನ್ನು ಪಟ್ಟಿಮಾಡಿ ಸಿದ್ಧಪಡಿಸಿ ಅಧ್ಯಯನ ಮಾಡಲಾಗಿದೆ.

**ಆನುಷಂಗಿಕ ಆಕರ ಸಾಮಗ್ರಿ**

ಈ ಸಂಶೋಧನೆಗೆ ಸಂಬಂಧಿಸಿದಂತೆ ಸಂಶೋಧನಾ ಮಹಾಪ್ರಬಂಧಗಳು, ಮುದ್ರಣಗೊಂಡ ಪುಸ್ತಕಗಳು, ದಿನ ಪತ್ರಿಕೆ, ಮಾಸ ಪತ್ರಿಕೆ, ಪ್ರಕಟಣೆಗಳನ್ನು ಮತ್ತು ಕೆಲವು ಕಲಾ ಲೇಖನಗಳು ಈ ವಿಷಯಕ್ಕೆ ಪೂರಕವಾದ ಇನ್ನಿತರ ಬರವಣಿಗೆಗಳಿಂದ ಸಂಗ್ರಹಿಸಿದ ಆನುಷಂಗಿಕ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ.

**********

## ಅಧ್ಯಾಯ ಎರಡು

# ಐತಿಹಾಸಿಕ ಹಿನ್ನೆಲೆ ಹಾಗೂ ದೃಶ್ಯಕಲೆಗಳ ವೈವಿಧ್ಯತೆ ಮತ್ತು ಹರವು

ಭಾರತೀಯ ಕಲೆಯು ಹಲವಾರು ರೀತಿಯಲ್ಲಿ ಬೆಳೆದು ಬಂದಿದೆ. ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಚಿತ್ರಕಲೆ, ಶಿಲ್ಪಕಲೆ, ವಾಸ್ತುಶಿಲ್ಪ ಹೀಗೆ ವಿವಿಧ ರೀತಿಯಲ್ಲಿ ಬೆಳೆದು ಬಂದಿರುವುದು ಗೋಚರವಾಗುತ್ತದೆ. ಈ ಕಲೆಗಳಲ್ಲಿ ಹಲವಾರು ಶೈಲಿಗಳು ಹುಟ್ಟಿಕೊಂಡು ರಚನೆಯಾಗಿರುವುದು ಕಂಡುಬರುತ್ತದೆ. ಆದರೆ ಇಂತಹ ಶೈಲಿಗಳಲ್ಲಿ ಹಲವಾರು ಧರ್ಮದ ಹಿನ್ನೆಲೆಯಲ್ಲಿ ವಿವಿಧ ದೇವರುಗಳು ರಚನೆಯಾಗಿರುವುದು ಐತಿಹಾಸಿಕವಾಗಿ ತಿಳಿದುಬರುತ್ತದೆ. ಈ ದೇವರುಗಳ ರಚನೆಗೆ ವಿವಿಧ ಸಾಹಿತ್ಯ ಗ್ರಂಥಗಳು ಪೂರಕವಾಗಿವೆ. ಅವುಗಳ ಆಧಾರದ ಮೇಲೆ ಕೆಲವು ದೇವರುಗಳು ರಚನೆಯಾಗಿರುವುದು ಕಂಡುಬರುತ್ತದೆ. ಈ ರೀತಿಯ ದೇವರುಗಳಲ್ಲಿ ಸರಸ್ವತಿ, ಆಂಜನೇಯ, ವಿಷ್ಣುವಿನ ದಶಾವತಾರಗಳು, ಶಿವನ ರೂಪಗಳು, ಗಣಪತಿ ಹೀಗೆ ಬೇರೆ ಬೇರೆ ದೇವರುಗಳು ರಚನೆಯಾಗಿವೆ. ಆದರೆ ಇವುಗಳಲ್ಲಿ ಬಾಹ್ಯ ಪ್ರಪಂಚದಲ್ಲಿ ಇರಲಾರದ ಕಲ್ಪನೆಯನ್ನು ಕೊಟ್ಟು ರಚಿಸಿರುವುದು ಕಾಣುತ್ತೇವೆ. ಉದಾಹರಣೆಗೆ ಗಣಪತಿ. ಈ ಗಣಪತಿಯು ಮನುಷ್ಯ ದೇಹ ಪ್ರಾಣಿಯ ಮುಖ ತನ್ನಲ್ಲಿ ಮೇಳೈಸಿಕೊಂಡು ವಿಶಿಷ್ಟ ದೇವನಾಗಿದ್ದಾನೆ. ಕೆಲವು ವಿಮರ್ಶಕರು ಈ ರೀತಿಯ ಹೊಂದಾಣಿಕೆ ಸಾಧ್ಯವೇ ಎಂದು ಪ್ರಶ್ನಿಸಿದಾಗ ಗಣೇಶನ ಹುಟ್ಟಿನ ಬಗೆಗೆ ಸಾಹಿತ್ಯ ಗ್ರಂಥಗಳು ಉಲ್ಲೇಖಿಸುತ್ತವೆ.

ಗಣೇಶನ ಹಲವಾರು ರೂಪಗಳ ಬಗೆಗಿನ ಉಲ್ಲೇಖಗಳನ್ನು ವೇದ ಮತ್ತು ಉಪನಿಷತ್ತುಗಳಲ್ಲಿ, ಪುರಾಣಗಳಲ್ಲಿ ಮತ್ತು ವಿವಿಧ ಶಾಸನಗಳಲ್ಲಿ ಕಾಣಬಹುದಾಗಿದೆ. ಆದರೆ ವೇದಗಳಲ್ಲಿ ಮತ್ತು ಪುರಾಣಗಳಲ್ಲಿ ಗಣಪತಿಗೆ ಹಲವಾರು ಕಟ್ಟು ಕಥೆಗಳೂ ಕಂಡುಬರುತ್ತವೆ.

ಅನೇಕ ಶತಮಾನಗಳಿಂದಲೂ ಭಾರತವು ಧಾರ್ಮಿಕ ಚಿಂತನೆಗಳಿಗಾಗಿ ಪ್ರಸಿದ್ಧಿಯನ್ನು ಪಡೆದಿದೆ. ಅಸಂಖ್ಯಾತ ಋಷಿಮುನಿಗಳು, ಸಾಧುಸಂತರು ತಮ್ಮ ತಪಸ್ಸು ಹಾಗೂ ಚಿಂತನೆಗಳ ಪ್ರಭಾವದಿಂದ ಈ ಪರಂಪರೆಯನ್ನು ಬೆಳೆಸಿ ಸಿರಿವಂತಗೊಳಿಸಿದ್ದಾರೆ. ಈ ವೇದ ಸಾಹಿತ್ಯವು ಪ್ರಪಂಚದ ಸಾಹಿತ್ಯಗಳಲ್ಲಿ ಪ್ರಾಚೀನವಾದುದು. ವೇದ ಸಾಹಿತ್ಯದಲ್ಲಿ ಹಲವಾರು ದೇವಾನುದೇವತೆಗಳ ವಿವರಣೆ ಬರುತ್ತದೆ. ಅದರ ಜೊತೆಗೆ ಗಣಪತಿಯ ಉಲ್ಲೇಖವು ಕೂಡ ಬರುತ್ತದೆ.

ಗಣಾನಾಂ ತ್ವಾ ಗಣಪತಿಂ ಹವಾಮಹೇ<br>
ಪ್ರಿಯಾಣಾಂ ತ್ವಾ ಪ್ರಿಯಪತಿಂ ಹವಾಮಹೇ<br>
ನಿಧೀನಾಂ ತ್ವಾ ನಿಧಿಪತಿಂ ಹವಾಮಹೇ ವಸೋ ಮಮ ।<br>
ಆಮಹಬಾನಿ ಗರ್ಭಧಮಾ ತ್ವಾ ಮಜಾಸಿ ಗರ್ಭಧಂ ॥

ಓ ಗಣರಕ್ಷಕನೇ! ನಿನ್ನನ್ನು ಪ್ರಾರ್ಥಿಸುತ್ತೇವೆ ಹೇ ಪ್ರಿಯಕರ ರಕ್ಷಕನೇ! ನಿನ್ನನ್ನು ಪ್ರಾರ್ಥಿಸುತ್ತೇವೆ! ನಿಧಿಗಳಿಗೆ ಅಧಿಪತಿಯೇ! ನಿನ್ನನ್ನು ಪ್ರಾರ್ಥಿಸುತ್ತೇವೆ ಹಿರಣ್ಯ ಗರ್ಭನಂತೆ ರಕ್ಷಕನಾದ ನಿನ್ನನ್ನು ತಿಳಿಯುವ ಶಕ್ತಿಯನ್ನು ದಯಪಾಲಿಸು. ಹೀಗೆ ವೇದದ ಎಲ್ಲ ಭಾಗಗಳಲ್ಲಿಯೂ ಗಣಪತಿಯ ಬಗೆಗೆ ವರ್ಣನೆಗಳು ನೋಡಸಿಗುತ್ತವೆ. ಆದರೆ ಗಣಪತಿಯ ವಿಷಯದಲ್ಲಿ ಕೆಲವರು ಹೀಗೆ ಆಪೇಕ್ಷಿಸುತ್ತಾರೆ. ವೇದಗಳಲ್ಲಿ ಗಣಪತಿಯ ಮಂತ್ರಗಳೆಂದು ಹೇಳುವ ಮಂತ್ರಗಳಲ್ಲಿ ಬ್ರಹ್ಮಣಸ್ಪತಿ ಎಂದಾಗಲಿ, ಬೃಹಸ್ಪತಿ ಎಂದಾಗಲಿ ಪ್ರಯೋಗಿಸಲಾಗಿದೆ. ಈ ಕಾರಣದಿಂದ ಆ ಮಂತ್ರಗಳಲ್ಲಿ ಅಲ್ಲಲ್ಲಿ ಗಣಪತಿ ಎಂಬ ಪದವಿದ್ದರೂ ಆ ಪದಕ್ಕೆ ನಾವು ಭಾವಿಸುತ್ತಿರುವ ಗಜಾನನ, ಲಂಬೋಧರ, ಮೂಷಿಕವಾಹನ ಎಂಬ ಅರ್ಥವಿಲ್ಲ. ಆ ಪದಕ್ಕೆ ಕೇವಲ ಗಣನಾಯಕ ಅಥವಾ ದೇವತೆಗಳ ಮುಖ್ಯಸ್ಥ ಎಂದಷ್ಟೇ ಅರ್ಥ. ದೇವ ಗುರುವಾದ ಬೃಹಸ್ಪತಿ ಸಿದ್ಧನಾಗಿಯೇ ಇದ್ದಾನೆ. ಹೀಗಿರುವುದರಿಂದ ಗಣಪತಿಯು ವೇದಕಾಲದ ದೇವತೆಯಲ್ಲ ಅನಂತರ ಕಾಲದಲ್ಲಿ ಗಣೇಶನ ಕಲ್ಪನೆಯು ಮೂಡಿ ಬರುತ್ತದೆ. ಇದರಿಂದ ಗಣೇಶನು ವೇದಕಾಲದ ದೇವನಾಗಿರದೇ ಅನಂತರ ಕಾಲದಲ್ಲಿ ಹುಟ್ಟುಹಾಕಲ್ಪಟ್ಟ ದೇವನಾಗಿದ್ದಾನೆ.

ಈ ಮೇಲಿನ ಆಕ್ಷೇಪವನ್ನು ಆಸ್ತಿಕರು ಒಪ್ಪುವುದಿಲ್ಲ. ಏಳನೇ ಶತಮಾನದಲ್ಲಿದ್ದ ಸ್ಕಂದ ಸ್ವಾಮಿಯು ತನ್ನ ಋಗ್ವೇದದ ಭಾಷ್ಯದ ಪ್ರಾರಂಭದಲ್ಲಿ ಹೇಳುವಂತೆ ಬ್ರಹ್ಮಣಸ್ಪತಿ, ಬೃಹಸ್ಪತಿ ಹಾಗೂ ಗಣಪತಿ ಈ ಮೂರೂ ದೇವತೆಯ ಹೆಸರೇ ಆಗಿರುತ್ತವೆ.[೧] ಮುಂದೆ ವಿವಿಧ ಪುರಾಣಗಳು ಹಲವಾರು ರೀತಿಯಲ್ಲಿ ಗಣೇಶನ ಹುಟ್ಟಿನ ಬಗೆಗೆ ವಿವರಣೆಯನ್ನು ನೀಡುತ್ತವೆ.

**ಪುರಾಣೋಕ್ತ ಗಣಪತಿಗಳು**

ಗಣಪತಿಯ ಪರಿಕಲ್ಪನೆಯು ಹಲವಾರು ಪುರಾಣ ಸಾಹಿತ್ಯ ಕೃತಿಗಳಲ್ಲಿ ಕಾಣಬಹುದು. ಇದು ವೇದಕಾಲದಿಂದ ಮುಂದುವರೆದು ಜಾನಪದ ಹಿನ್ನೆಲೆಯಲ್ಲಿ ಬೆಳೆದು ಬಂದಿದೆ ಎಂದೂ

---

೧. ಗಣಪತಿ ದರ್ಶನ (ಶಿಲಾ ದೇಗುಲ ಸಮರ್ಪಣ ಮಹೋತ್ಸವ ಸಂಪುಟ), ಡಾ. ಅನಂತ ನಾಗೇಂದ್ರ ಭಟ್ ಅವರ ಲೇಖನ, ಪು.ಸಂ-೩೦,೩೧

ಹೇಳುತ್ತಾರೆ. ಇದು ಶೃತಿ, ಸ್ಮೃತಿ, ಇತಿಹಾಸ, ಆಗಮ, ತಂತ್ರ, ಜಾನಪದ ಇತಿಹಾಸವೇ ಅನೇಕ ಸಾಂಸ್ಕೃತಿಕ, ಆಧ್ಯಾತ್ಮಿಕ ಸ್ತರಗಳಲ್ಲಿ ವ್ಯಾಪಕವಾಗಿ ವೈವಿಧ್ಯದಿಂದ ಬೆಳೆದು ಬಂದಿದೆ. ಈ ಅಂಶವನ್ನು ವೈಧಿಕ ಪುರಾಣ ಸಮೂಹದಲ್ಲಿ ಯತಾಮತಿ, ಯತಾಶಕ್ತಿ ಗುರುತಿಸುವುದೇ ಪ್ರಕೃತ ಪ್ರಯತ್ನದ ಉದ್ದೇಶ. ಪುರಾಣ ವಸ್ತುವಿನ್ಯಾಸ ಅತ್ಯಂತ ವಿಶಿಷ್ಟವೂ, ವ್ಯಾಪಕವೂ ಆಗಿದೆ. ಇವುಗಳ ಕಾಲದೇಶ, ಔಚಿತ್ಯ ಸಂಕೇತಗಳ ಬಗೆಗೆ ಹೆಚ್ಚು ಚರ್ಚಿಸದೇ ವಿಭಿನ್ನ ಪುರಾಣಗಳಲ್ಲಿ ಸೇರಿದಂತೆ ಸುಮಾರು ಹದಿನಾರು ಪುರಾಣಗಳಲ್ಲಿ ಗಣಪತಿ ವಿಚಾರವಿದೆ. ಇವುಗಳಲ್ಲಿ ಗಣಪತಿಯನ್ನು ಕುರಿತು ನಾನಾ ಕಥೆಗಳು, ವ್ರತಗಳು, ಸ್ತುತಿಗಳು, ಸಂಕೇತಗಳು, ವಿದ್ಯೆಗಳು, ತಂತ್ರಗಳು ಬಂದಿರುವುದಲ್ಲದೆ, ಗಣಪತಿಯ ವಿವಿಧ ರೂಪಗಳು ವಿಭಿನ್ನ ವೇದಾಂತಿಕ ವಿವರಣೆಗಳು, ಶಿಲ್ಪಗಮಾದಿಗಳು, ರಹಸ್ಯಗಳು ಸಹ ಬಂದಿವೆ. ಗಣಪತಿಯ ಬಗೆಗೆ ವಿವೇಚಿಸುವ ಪ್ರಮುಖ ಪುರಾಣಗಳು ಇಂತಿವೆ.

| | |
|---|---|
| ೧. ಬ್ರಹ್ಮವೈವರ್ತ ಪುರಾಣ | ೨. ಶಿವ ಪುರಾಣ |
| ೩. ಪದ್ಮ ಪುರಾಣ | ೪. ಭವಿಷ್ಯ ಪುರಾಣ |
| ೫. ಸ್ಕಂದ ಪುರಾಣ | ೬. ವಿಷ್ಣುಧರ್ಮೋತ್ತರ ಪುರಾಣ |
| ೭. ವರಾಹ ಪುರಾಣ | ೮. ಲಿಂಗ ಪುರಾಣ |
| ೯. ಅಗ್ನಿ ಪುರಾಣ | ೧೦. ಬ್ರಹ್ಮಾಂಡ ಪುರಾಣ |
| ೧೧. ನಾರದ ಪುರಾಣ | ೧೨. ದೇವಿ ಭಾಗವತ ಪುರಾಣ |
| ೧೩. ವಾಮನ ಪುರಾಣ | ೧೪. ಗರುಡ ಪುರಾಣ |
| ೧೫. ಬ್ರಹ್ಮ ಪುರಾಣ, ಸೌರ ಪುರಾಣ | ೧೬. ಗಣೇಶ ಪುರಾಣ, ಮುಗ್ದಲ ಪುರಾಣ[೨] |

ಹೀಗೆ ಹಲವಾರು ಪುರಾಣ ಗ್ರಂಥಗಳು ಗಣೇಶನ ವಿವರಣೆಯನ್ನು ನೀಡುತ್ತವೆ. ಆದರೆ ಶಿವ ಪುರಾಣದಲ್ಲಿ ಗಣೇಶನ ಹುಟ್ಟಿನ ಬಗೆಗೆ ಹೇಳುವಾಗ ಗಣೇಶನು ಪಾರ್ವತಿಯ ಗರ್ಭಜಾತನಲ್ಲ, ಪಾರ್ವತಿಯು ತನ್ನ ಮೈಮಲದಿಂದಲೋ, ಮಣ್ಣಿನಿಂದಲೋ ಒಂದು ಮಾನವಾಕೃತಿಯನ್ನು ಮಾಡಿ ಅದಕ್ಕೆ ಜೀವಕೊಟ್ಟು ನೀನೊಬ್ಬನೇ ನನ್ನ ಮಗ ಎಂದು ಹೇಳಿದಳಂತೆ ತಾನು ಸ್ನಾನ ಮಾಡಲು ಹೋಗುವಾಗ ಒಳಕ್ಕೆ ಯಾರನ್ನು ಬಿಡಬಾರದೆಂದು ಕಟ್ಟಪ್ಪಣೆ ಮಾಡಿದಳಂತೆ. ಅದೇ ಕಾಲಕ್ಕೆ ಶಿವನು ಒಳಹೋಗಲು, ಬರಲು ಪಾರ್ವತಿಯ ಆಜ್ಞಾಪಾಲಕನಾದ ಈ ಬಾಲ ಗಣೇಶನು ಶಿವನನ್ನು ಒಳ ಹೋಗಲು ಬಿಡಲಿಲ್ಲ. ಇದರಿಂದ ಕ್ರೋಧಗೊಂಡ ಶಿವನು ತನ್ನ ತ್ರಿಶೂಲದಿಂದ ಗಣೇಶನ ಶಿರಚ್ಛೇದನ ಮಾಡಿದ ಈ ದೃಶ್ಯವನ್ನು ನೋಡಲು ದೇವತೆಗಳ ಗಣ ಸಮೂಹವೇ ಸೇರುತ್ತದೆ. ಗಣೇಶನ ಮರಣದಿಂದ ದುಃಖಿತಳಾದ ಪಾರ್ವತಿಯು ತನ್ನ ಮಗನನ್ನು ಸಜೀವಗೊಳಿಸಬೇಕೆಂದು ಅವನಿಗೆ ಅಗ್ರಪೂಜೆಯಾಗಬೇಕೆಂದು ಹಟಹಿಡಿಯುತ್ತಾಳೆ. ಶಿವನು ತನ್ನ ಗಣ ಸಮೂಹವನ್ನು ಕರೆದು ಉತ್ತರ ದಿಕ್ಕಿಗೆ ತಲೆಹಾಕಿ ಮಲಗಿರುವ ಯಾವುದೇ

---

೨. ಗಣಪತಿ ದರ್ಶನ, ಶತವಧಾನಿ ಆರ್. ಗಣೇಶ ಅವರ ಲೇಖನ, ಪು.ಸಂ–೪೩

ಪ್ರಾಣಿ ಅಥವಾ ಮನುಷ್ಯರ ತಲೆಯನ್ನು ತರಲು ಆಜ್ಞಾಪಿಸಿದನಂತೆ. ಏಕದಂತವುಳ್ಳ ಒಂದು ಆನೆಯ ತಲೆಯನ್ನು ತರುತ್ತಾರೆ. ಅದನ್ನು ಗಣೇಶನ ಮುಂಡಕ್ಕೆ ಜೋಡಿಸಿ ಮಂತ್ರೋದಕ ಪ್ರೋಕ್ಷಿಸಿ ಸಜೀವಗೊಳಿಸುತ್ತಾನೆ. ನಂತರ ಅವನು ಗುಣಮುಖನಾಗಿ ದೇವತೆಗಳಿಂದಲೂ ಅಗ್ರಪೂಜೆಗೊಳ್ಳುವ ವರವನ್ನು ಪಡೆದುಕೊಳ್ಳುತ್ತಾನೆ.[೩] ಹೀಗೆ ವಿವಿಧ ಪುರಾಣಗಳು ಗಣೇಶನ ಹುಟ್ಟಿನ ಬಗೆಗೆ ಹಲವಾರು ರೀತಿಯ ವಿವರಗಳನ್ನು ನೀಡುತ್ತವೆ.

**ಬ್ರಹ್ಮ ವೈವರ್ತ ಪುರಾಣ :** ಗಣಪತಿ ಖಂಡದ ಹತ್ತೊಂಬತ್ತು ಅಧ್ಯಾಯಗಳಲ್ಲಿ ಗಣೇಶನ ಜನ್ಮದ ಬಗೆಗೆ ಹಲವು ವಿವರಗಳಿವೆ. ಇದರ ಪ್ರಕಾರ ಸಂತತಿಗಾಗಿ ಪಾರ್ವತಿಯು ವಿಷ್ಣುವನ್ನು ಕುರಿತು "ಪುಣ್ಯಕ ವ್ರತ"ವನ್ನು ಆಚರಿಸಿ ತತ್ಫಲಿತವಾಗಿ ವಿಷ್ಣುವನ್ನೇ ಗಣಪತಿ ರೂಪವಾಗಿ ಪಡೆದಳು. ಮಗುವಿನ ಹುಟ್ಟಿದ ಹಬ್ಬದಂದು ಎಲ್ಲ ದೇವತೆಗಳು ಜಗನ್ಮೋಹನಾಕಾರದ ಆ ದಿವ್ಯ ಶಿಶುವನ್ನು ಆನಂದಶ್ಚರ್ಯಗಳಿಂದ ನೋಡುತ್ತಿದ್ದಾಗ ಶನೈಶ್ಚರನು ಮಾತ್ರ ದೂರವಿದ್ದುದನ್ನು ಕಂಡ ಪಾರ್ವತಿಯು ಆತನಲ್ಲಿ ತನ್ನ ಮಗನನ್ನು ಕಾಣಲು ಒತ್ತಾಯಿಸಿದಳು. ಆದರೆ ತನ್ನ ದೃಷ್ಟಿಯಿಂದ ಶಿಶುವಿಗೆ ಕೇಡಾದಿತೆಂದು ಶನೈಶ್ಚರನು ಅಳುಕಲು, ಪಾರ್ವತಿಯು ಬಿಡದೆ ಹಠತೊಟ್ಟು ತನ್ನ ಮಗುವನ್ನು ಕಾಣಲೇಬೇಕೆಂದು ಒತ್ತಾಯಿಸಿದಳು. ಗತ್ಯಂತರವಿಲ್ಲದೆ ಆತನು ಮಗುವನ್ನು ಕಂಡಾಗ ಆ ಕೂಡಲೇ ಆತನ ದೃಷ್ಟಿ ಫಲವಾಗಿ ಹೊಸತಾಗಿ ಜನಿಸಿದ ಮಗುವಿಗೆ ಶಿರಸ್ಸು ಭಿನ್ನವಾಗಿ ಗೋಲೋಕವನ್ನು ಸೇರಿತು. ಆಗ ಶೋಕಾಕಲೆಯಾದ ಗೌರಿಯನ್ನು ಸಮಾಧಾನಗೊಳಿಸಲು ವಿಷ್ಣುವು ಗರುಡನ್ನೇರಿ ಪುಷ್ಪ ಭದ್ರಾನದಿಯ ತೀರದಿಂದ ಆನೆಯ ತಲೆಯೊಂದನ್ನು ತಂದು ಗಣಪತಿಯನ್ನು ಉಜ್ಜೀಸಿ ಗಜಮುಖನನ್ನಾಗಿಸಿದ. ಆಗಲೇ ಗಣೇಶನಿಗೆ ವಿಘ್ನೇಶ, ಗಣೇಶ, ಹೇರೆಂಬ, ಗಜಾನನ, ಲಂಬೋದರ, ಏಕದಂತ, ಶೂರ್ಪಕರ್ಣ ಮತ್ತು ವಿನಾಯಕರೆಂಬ ಅಷ್ಟನಾಮಗಳು ಅರ್ಪಿತವಾದವು. ಗಣಪತಿಯ ಮುಖಕ್ಕೆ ಬದಲಾಗಿ ಇಡಲ್ಪಟ್ಟ ಆನೆಯು ಐರಾವತದ ಸಂತತಿ ಎಂದು ಅದು ಜನ್ಮದಿಂದಲೇ ಜ್ಞಾನಿಯಾಗಿ ಗಜೇಂದ್ರನೆನಿಸಿಕೊಂಡಿತ್ತೆಂದು ದುರ್ವಾಸರ ಅನುಗ್ರಹ ಅದಕ್ಕಿತ್ತೆಂದು ಈ ಪುರಾಣವೇ ವಿವರಿಸುತ್ತದೆ.

**ಪದ್ಮ ಪುರಾಣ :** ಇಲ್ಲಿ ಬರುವ ಗಣೇಶೋತ್ಪತ್ತಿಯು ಕಿಂಚಿದ್ಭಿನ್ನವಾಗಿದೆ. ಈ ಪ್ರಕಾರ ಹಿಂದೆ ಗಂಗಾತೀರದಲ್ಲಿ ಶಿವನೊಡನೆ ವಿಹರಿಸುತ್ತಿದ್ದ ಗೌರಿಯು ತನ್ನ ತನುಲೇಪನದಿಂದ ಬಾಲ ಮೂರ್ತಿಯೊಂದನ್ನು ರೂಪಿಸಿದಳು. ಆದರೆ ಗಜಮುಖವನ್ನು ಹೊಂದಿದ್ದ, ಈ ಗೊಂಬೆಯು ಆಕೆಗೆ ಸರಿಕಾಣದ ಕಾರಣ ಅದನ್ನು ಗಂಗೆಗೆ ಎಸೆದಳು. ಗಂಗೆಗೆ ಬಿದ್ದ ಗೊಂಬೆ ಕೂಡಲೇ ಜೀವತಾಳಲು, ಮಾತೃವಾತ್ಸಲ್ಯವನ್ನು ತಳೆದ ಪಾರ್ವತಿಯೂ ತನ್ನಲ್ಲಿ ಬಿದ್ದು ಚೈತನ್ಯ ತಳೆದನೆಂಬ ಕಾರಣಕ್ಕಾಗಿ ಸ್ನೇಹಪರವಶೆಯಾದ ಗಂಗೆಯೂ ಒಟ್ಟಾಗಿ ಆ ಶಿಶುವನ್ನು ಲಾಲಿಸಿದರು. ಹೀಗಾಗಿಯೇ ಗಣಪತಿಯು ದ್ವೈಮಾತುರ ಎಂದೆನಿಸಿದ.

---

೩. ಪುರಾಣ ದೇವತೆಗಳ ಪರಾಮರ್ಶೆ ಮತ್ತು ದೇವರು ಪು.ಸಂ-೧೮೨,೮೩

**ಸ್ಕಂದ ಪುರಾಣ :** ಈ ಪುರಾಣದ ಪ್ರಕಾರ ಒಮ್ಮೆ ಮಾನವರೆಲ್ಲರೂ ಸ್ವರ್ಗ ಪ್ರಾಪ್ತಿಗೆಂದು ಯಜ್ಞಕ್ಕೆ ತೊಡಗಲು, ಗಾಬರಿಗೊಂಡ ಇಂದ್ರನು ಶಿವನಿಗೆ ಶರಣಾದ. ಆಗ ಶಿವನಿಚ್ಛೆಯಂತೆ ಪಾರ್ವತಿಯೂ ತನ್ನ ಮೈಮಲದಿಂದ ಗಣಪತಿಯನ್ನು ಗಜಮುಖನಾಗಿಯೇ ಸೃಜಿಸಿದಳು. ಬಳಿಕ ಆಕೆಯ ಅಣತಿಯಂತೆ ಗಣಪತಿಯು ಸಶರೀರವಾಗಿ ಸ್ವರ್ಗಕ್ಕೆ ಬರಲೆಳಸುವ ಮನುಜರಿಗೆ ನಾನಾ ವಿಘ್ನಗಳೊಡ್ಡಿದ. ಈ ದೇವತಾ ಕೃತ್ಯದಿಂದ ಸಂತುಷ್ಟರಾದ ದಿವಿಜಯರು ಗಣಪತಿಗೆ ನಾನಾ ವಿಧವಾದ ಕೊಡುಗೆಗಳನ್ನಿತ್ತು ಗಣಾಧಿಪತ್ಯವನ್ನು ನೀಡಿದರು. ಇದೇ ಪುರಾಣದ ಮತ್ತೊಂದು ಕಥೆಯು ತಾರಕಾಸುರನ ವಧೆಗಾಗಿ ಕುಮಾರಸ್ವಾಮಿಯು ಜನಿಸುವವರೆಗೂ ಆತನಿಂದ ದೇವತೆಗಳನ್ನು ರಕ್ಷಿಸಲೆಂದು ಪಾರ್ವತಿಯು ತನ್ನ ತನು ಲೇಪನ ದ್ರವ್ಯದಿಂದ ಸೃಜಿಸಿದ ಗಜಮುಖನು ವಾಮನ ರೂಪಿಯೂ ಆದ ಗಣಾಧ್ಯಕ್ಷನೇ ವಿನಾಯಕ.

**ವರಾಹ ಪುರಾಣ :** ಇದರ ಪ್ರಕಾರ ಒಮ್ಮೆ ದೇವತೆಗಳೆಲ್ಲರೂ ಲೋಕದಲ್ಲಿ ಸಜ್ಜನರಿಗೆ ಕಷ್ಟಗಳು ಬರುತ್ತಿರುವುದನ್ನು ಗಮನಿಸಿ ಇದಕ್ಕೆ ಪರಿಹಾರವೇನೆಂದು ಕೇಳಲು ಶಿವನ ಬಳಿಗೆ ಹೋದರು. ಧ್ಯಾನದಲ್ಲಿದ್ದ ಶಿವನು ಇದನ್ನು ಕೇಳಿದ ಕೂಡಲೇ ಕಿರುನಗೆ ಬೀರಿದನು. ಇದಕ್ಕೆ ಕಾರಣ ಅದನ್ನು ಆ ಹೊತ್ತಿನಲ್ಲಿ ಪಂಚಭೂತಗಳ ಪೈಕಿ ಪೃಥಿವೀ ಆಫ್ ತೇಜಸ್ ವಾಯುಗಳು ಮಾತ್ರ ಸಾಕಾರವಾಗಿರುವುದನ್ನು ಆಕಾಶವು ನಿರಾಕಾರವಾಗಿರುವುದನ್ನು ನೆನೆದು ಈ ವಿಪರ್ಯಾಸವನ್ನು ಪರಿಭಾವಿಸುದ್ದುದೇ ಆಗಿತ್ತು. ಬಳಿಕ ಆತನಿಗೆ ಬ್ರಹ್ಮನು ಹಿಂದೆ ತಿಳಿಸಿದ್ದೊಂದು ಅಂಶ ನೆನಪಿಗೆ ಬಂದಿತು. ಅದೇನೆಂದರೆ ಸೃಷ್ಟಿಕಾಲದಲ್ಲಿ ಬ್ರಹ್ಮನು ಶಿವನಿಗೆ ಸಾಕಾರವಾಗಿರುವ ಭೂತಗಳಿಂದಲೇ ವಿಘ್ನೇಶ್ವರನ ಸೃಷ್ಠಿಯಾಗುವದೆಂದು ಹೇಳಿದ್ದನು. ಈ ಬಗೆಗೆ ಎಲ್ಲರಿಗೂ ಭರಸೆಯನ್ನು ನೀಡಿದ್ದನು. ಅಂತೆಯೇ ಶಿವನು ಆಗ ವಿಘ್ನೇಶ್ವರನ ಆವಿರ್ಭಾವವೆ ಸಕಲಸಜ್ಜನರ ಕ್ಲೇಶನಿವಾರೋಣಪಾಯವೆಂದರಿತು ತನ್ನ ಕಿರು ನಗೆಯಿಂದಲೇ ದಿವ್ಯ ಸುಂದರ ತರುಣನನ್ನು ಸೃಜಿಸಿದನು. ಆತನನ್ನು ನೋಡಿ ಪಾರ್ವತಿಯು ಬೆರಗಾದುದನ್ನು, ಮುಗ್ಧಳಾದುದನ್ನು ಗಮನಿಸಿ ಶಿವನು ಕೋಪದಿಂದ ಆ ಸುಂದರ ತರುಣನನ್ನು ಗಜವದನನೂ, ಲಂಬೋಧರನೂ, ವಾಮನನೂ, ಸರ್ಪಭೂಷಣನೂ ಆಗಲೆಂದು ಶಪಿಸಿದನು. ಮತ್ತು ಕೋಪದಿಂದ ತನ್ನ ಶರೀರವನ್ನಲುಗಿಸಿ ಸಾವಿರಾರು ವಿನಾಯಕರನ್ನು ಸೃಷ್ಠಿಸಿದನು. ಅವರೂ ಗಜವದನರೂ, ವಾಮನರೂ ಆಗಿದ್ದರು. ಆಗ ದೇವತೆಗಳೆಲ್ಲರೂ ಶಿವನನ್ನು ಸಮಾಧಾನಪಡಿಸಿದರು. ಬಳಿಕ ಶಿವನು ಆ ತರುಣನನ್ನು ವಿನಾಯಕರುಗಳಿಗೆ ಒಡೆಯನನ್ನಾಗಿ ನೇಮಿಸಿ ಗಣಾಧಿಪತ್ಯವನ್ನು ನೀಡಿದ ವಿವರಣೆ ಬರುತ್ತದೆ.

**ಬ್ರಹ್ಮಾಂಡ ಪುರಾಣ :** ಇದರ ಪ್ರಕಾರ ಲಲಿತಾದೇವಿಯು ಭಂಡಾಸುರನ ಮೇಲೆ ಯುದ್ಧವನ್ನು ಹೂಡಿದಾಗ ದೇವಿಯ ಅನುಚರಿಯರಾದ ಅಂಬಿಕೆ ಮತ್ತು ದಂಡನಾಥೆಯರಿಂದ ಭಂಡಾಸುರನ ಮೂರುನೂರು ಮಕ್ಕಳು ಮೃತರಾದರು. ಆಗ ಭಂಡಾಸುರನ ದೂರ್ತಮಂತ್ರಿ ವಿಶುಕ್ರನು ದೊಡ್ಡ ಶಿಲೆಯೊಂದರ ಮೇಲೆ ವಿಘ್ನಯಂತ್ರವನ್ನು ಬರೆದು ವಾಮಾಚಾರ ಮಾಡಿ ದೇವಿಯ

ಸ್ಕಾಂಧಾವಾರದಲ್ಲದನ್ನು ಸ್ಥಾಪಿಸಿದ. ಇದರ ಫಲವಾಗಿ ದೇವಿಸೈನ್ಯದಲ್ಲಿ ಆಲಸ್ಯ, ಕಾರ್ಪಣ್ಯ, ದೈನ್ಯ, ನಿದ್ರೆ, ಕ್ಲೈಬ್ಯ, ವಿಸ್ಮೃತಿ, ಪ್ರಮಾದ ಮತ್ತು ತಂದೆಗಳೆಂಬ ವಿಘ್ನಗಳು ತಲೆದೋರಿದವು. ಆಗ ದೇವಿಯು ಮಹಾಕಾಮೇಶ್ವನ ಮುಖವನ್ನು ಕಂಡು ದರಸಾಹಸವನ್ನು ಬೀರಲು, ಆ ಕಿರುನಗೆಯಿಂದ ದಶುಭುಜಾನ್ವಿತನು ಗಜಮುಖವನ್ನು ಸಿದ್ಧಿಲಕ್ಷ್ಮೀ ಸಹಿತನು ಆದ ಗಣಪತಿಯು ಆವಿರ್ಭವಿಸಿ ವಿಘ್ನಯಂತ್ರವನ್ನು ದ್ವಂಸ ಮಾಡಿದನು.

ಈ ಪುರಾಣದಲ್ಲಿ ಗಣಪತಿಯ ಆಮೋದ, ಪ್ರಮೋದ, ದುರ್ಮುಖ, ಸುಮುಖ, ವಿಘ್ನಹರ್ತೃ ಮತ್ತು ವಿಘ್ನಕರ್ತಗಳೆಂಬ ಆರು ವಿಘ್ನನಾಯಕರೊಡನೆ ತೀವ್ರಾ, ಜ್ವಾಲಿನಿ, ನಂದಾ, ಸಂಭೋಗದಾ, ಕಾಮರೂಪಿಣೀ, ಉಗ್ರಾ, ತೋಜೋವತಿ, ಸತ್ಯ ಮತ್ತು ವಿಘ್ನನಾಶಿಯರೆಂಬ ಒಂಬತ್ತು ಶಕ್ತಿಗಳೊಡನೆಯು ಭಂಡಾಸುರನ ಬೆಂಬಲಿಗನಾದ ಗಜಾಸುರನನ್ನು ಸಸೈನ್ಯವಾಗಿ ನಾಶಗೊಳಿಸಿ ದೇವಿಯ ಕೃಪೆಗೆ ಪಾತ್ರನಾದನು. ಇದರಿಂದಾಗಿಯೇ ಆತನಿಗೆ ಅಗ್ರಪೂಜೆ ಗೌರವ ಲಭಿಸಿತು.

**ಬ್ರಹ್ಮ ಪುರಾಣ :** ಇದರ ಪ್ರಕಾರ ಗಣಪತಿಯು ಶಿಶುವಾಗಿರುವಾಲೇ ಸೋದರನಾದ ಸ್ಕಂದನಿಗೆ ತಾಯಿಯ ಸ್ತನ್ಯವನ್ನು ದಕ್ಕಲೀಯದೆ ತಾವೇ ಸಮಸ್ತವನ್ನು ಪಾನ ಮಾಡಲು ಆಗ ಶಿವನು ಆತನಿಗೆ ಲಂಬೋದರನಾಗೆಂದು ಶಪಿಸಿದ ಕಥೆಯನ್ನು ತಿಳಿಸುತ್ತದೆ.

**ದೇವಿ ಭಾಗವತ ಪುರಾಣ :** ದೇವಿ ಭಾಗವತ ಪುರಾಣದಲ್ಲಿ ಗಣಪತಿಯು ವಿಘ್ನನಾಶಕ್ಕೆ ತೊಡಗುವಾಗ ಶಿವ, ಬ್ರಹ್ಮ, ಸೂರ್ಯ, ವರುಣ, ವಿಷ್ಣು, ಯಮ, ಇಂದ್ರ ಮುಂತಾದವರು ಬಾಲಚಂದ್ರ, ಮೇಖಲೆ, ಚಿಂತಾಮಣಿ, ಪಾಶ, ಶಂಖ, ದಂಡ, ವಜ್ರಾಯುಧಗಳನ್ನು ನೀಡಿದ ಕತೆಯನ್ನು ಹೇಳುತ್ತದೆ.

**ಲಿಂಗಪುರಾಣ** : ಗಣಪತಿಗೆ ಶಿವನು ದುಷ್ಟದಂಡನ ಶಿಷ್ಟ ರಕ್ಷಕಗಳ ಅಧಿಕಾರವನ್ನು ನೀಡಿದ ಕತೆ ಹೇಳುತ್ತದೆ.

**ಅಗ್ನಿ ಪುರಾಣ :** ಈ ಪುರಾಣದಲ್ಲಿ ಗಣಪತಿಯ ಪೂಜಾ ವಿಧಿಯು ವಿಶದವಾಗಿ ಬಂದಿದೆ. ಆ ಬಳಿಕ ಅಲ್ಲಿಯೇ ವಿನಾಯಕ ಚತುರ್ಥಿಯಂ ದಿನದಲ್ಲದೆ, ಮಾಘ, ಶುಕ್ಲ ಚತುರ್ಥಿ ದಿನವಾಗಿರುವುದೊಂದು ವಿಶೇಷ. ಶತ್ರೋಚ್ಚಾಟನೆಗೆ ಪ್ರಯೋಜನಕಾರಿಯಾಗುವ ಗಣಪತಿ ಪೂಜೆ ಮಂತ್ರ, ಜಪ ಕ್ರಿಯೆಗಳೂ ಇಲ್ಲಿವೆ. ವಿಘ್ನನಾಶಕ್ಕಾಗಿ ಶಿವ ಗಾಯತ್ರಿಯೊಡನೆ ವಿಘ್ನನಾಶನ ಮಂಡಲದಲ್ಲಿ ಜಪ ಮತ್ತು ಹೋಮ ಪುರಸ್ಸರವಾಗಿ ನಡೆಸುವ ಗಣಪತಿ ಪೂಜೆಯು ಇಲ್ಲಿ ವಿಷದವಾಗಿದೆ. ಏಕಾಕ್ಷರ ಮಂತ್ರ, ಮಾತೃಕಾ ಮಂತ್ರ, ನವದುರ್ಗಾರ್ಚನಾದಿಗಳೊಂದಿಗೆ ಇಷ್ಟಾರ್ಥಸಿದ್ಧಿಗಾಗಿ ಮಾಡುವ ವಿನಾಯಕ ಪೂಜಾ ವಿಧಿಯನ್ನು ಇಲ್ಲಿ ಹೇಳಲಾಗಿದೆ.

**ಗಣೇಶ ಪುರಾಣ** : ಈ ಪುರಾಣವು ಗಾಣಪತ್ಯರ ಉಪಾಸನಾ ಪದ್ಧತಿಯನ್ನು ತಿಳಿಸುತ್ತದೆ. ಅವರ ಜೊತೆಗೆ ಮಹೋತ್ಕಟ ವಿನಾಯಕ, ಮಯೂರೇಶ್ವರ ಮತ್ತು ಗಣೇಶ ಎಂಬ ಮೂರು ಅವತಾರಗಳನ್ನು ನಿರೂಪಿಸುತ್ತಾ ಗಣಪತಿಯನ್ನು ಶಿವನೊಡನೆ ಸಮೀಕರಿಸಿದೆ. ಇಲ್ಲಿ ಗಣೇಶನ ಸಹಸ್ರನಾಮಗಳು ಮತ್ತು ಗೀತೆಗಳು ಬರುತ್ತವೆ. ಇಲ್ಲಿ ಸುಮುಖ, ಏಕದಂತ, ಕಪಿಲ, ಗಜಕರ್ಣ, ಲಂಬೋದರ, ವಿಕಟ, ವಿಘ್ನರಾಜ, ಗಣಾಧಿಪತಿ, ಧೂಮಕೇತು, ಗಣಾಧ್ಯಕ್ಷ, ಫಾಲಚಂದ್ರ ಮತ್ತು ಗಜಾನನರೆಂಬ ದ್ವಾದಶ ನಾಮಗಳ ಪ್ರಸ್ತಾಪವು ಬರುತ್ತದೆ. ಶಾಪ ವಿಮೋಚನೆಗೆಂದು ಗಣಪತಿಯ ವಾಹನವಾದ ಮೂಷಿಕ ರೂಪವನ್ನು ತಾಳಿದನೆಂದು ಇಲ್ಲಿಯ ಕಥೆ ಮತ್ತು ವಾತಾಪಿ ಗಣಪತಿ ಮಾಹಾತ್ಮ್ಯ ಮೊದಲಾದವು ಇಲ್ಲಿ ಬರುತ್ತವೆ.

**ಮುದ್ಗಲ ಪುರಾಣ** : ಗಣಪತಿಯ ಮೂವತ್ತೆರಡು ರೂಪಗಳನ್ನು ದಾಖಲಿಸುತ್ತದೆ. ಭಕ್ತ ಗಣಪತಿ, ಬಾಲ ಗಣಪತಿ, ತರುಣ ಗಣಪತಿ, ವೀರ ಗಣಪತಿ, ಶಕ್ತಿ ಗಣಪತಿ, ಉಚ್ಛಿಷ್ಟ ಗಣಪತಿ, ಸಿದ್ಧಿ ಗಣಪತಿ, ದ್ವಿಜ ಗಣಪತಿ, ವಿಘ್ನ ಗಣಪತಿ, ಕ್ಷಿಪ್ರ ಗಣಪತಿ, ಹೇರೆಂಬ ಗಣಪತಿ, ಲಕ್ಷ್ಮೀ ಗಣಪತಿ, ಮಹಾ ಗಣಪತಿ, ವಿಜಯ ಗಣಪತಿ, ನೃತ್ಯ ಗಣಪತಿ, ಊರ್ಧ್ವ ಗಣಪತಿ, ವರ ಗಣಪತಿ, ಏಕಾಕ್ಷರ ಗಣಪತಿ, ತಕ್ಷರ ಗಣಪತಿ, ಕ್ಷಿಪ್ರ ಪ್ರಸಾದ ಗಣಪತಿ, ಹರಿದ್ರಾ ಗಣಪತಿ, ಏಕದಂತ ಗಣಪತಿ, ಸೃಷ್ಟಿ ಗಣಪತಿ, ಉದ್ಧಂಡ ಗಣಪತಿ, ಸಂಕಷ್ಟಹರ ಗಣಪತಿ, ಡುಂಡಿ ಗಣಪತಿ, ದ್ವಿಮುಖ ಗಣಪತಿ, ತ್ರಿಮುಖ ಗಣಪತಿ, ಯೋಗ ಗಣಪತಿ, ದುರ್ಗಾ ಗಣಪತಿ, ಋಣ ವಿಮೋಚನೆ ಗಣಪತಿ, ಸಿಂಹ ಗಣಪತಿ ಹೀಗೆ ಗಣೇಶನ ರೂಪಗಳನ್ನು ವಿವರಿಸುತ್ತದೆ. ಅದರ ಜೊತೆಗೆ ಹಲವಾರು ಶ್ಲೋಕಗಳನ್ನಲ್ಲದೇ ಅಷ್ಟಾವತಾರಗಳ ವರ್ಣನೆಯುಂಟು. ದಂಭ, ಮತ್ಸರ, ಮಮತೆ, ಕಾಮ, ಕ್ರೋಧ, ಲೋಭ, ಮೋಹ, ಮದಾದಿ ರಾಕ್ಷಸರನ್ನು ಗೆದ್ದ ಕಥೆಗಳಿವೆ. ಇದು ಸಹ ಗಣೇಶ ಪುರಾಣದಂತೆ ಗಣಪತಿಯನ್ನು ತತ್ವಮಸಿ ವಾಕ್ಯ ಪ್ರತಿಪಾದ್ಯನಾದ ಪರಬ್ರಹ್ಮನೆಂದು ಹೇಳುತ್ತದೆ.[೪]

ಹೀಗೆ ಗಣಪತಿಯ ವಿವರಣೆಯು ವಿವಿಧ ಪುರಾಣಗಳಲ್ಲಿ ಬಂದಿರುವುದು ಕಂಡುಬರುತ್ತದೆ. ಕೆಲವರು ಪುರಾಣಗಳಲ್ಲಿ ಬಂದಿರುವ ವಿವರಣೆಯನ್ನು ಖಂಡಿಸುತ್ತಾರೆ, ಕೆಲವರು ಒಪ್ಪಿಕೊಳ್ಳುತ್ತಾರೆ. ಏನೇ ಇರಲಿ ನಾವು ಕಲಾ ವಿದ್ಯಾರ್ಥಿಯಾಗಿರುವುದರಿಂದ ಕಲೆಯ ಹಿನ್ನೆಲೆಯಲ್ಲಿ ನೋಡಿದಾಗ ಗಣೇಶನ ಚಿತ್ರ ಮತ್ತು ಶಿಲ್ಪದಲ್ಲಿ ವಿವಿಧ ಪುರಾಣಗಳಲ್ಲಿ ಹೇಳಿರುವಂತೆ ವಿವಿಧ ಅವತಾರಗಳನ್ನು ಪಡೆದು ಹಲವಾರು ರೀತಿಯಲ್ಲಿ ರಚನೆಯಾಗಿದ್ದಾನೆ. ಗಣೇಶನ ಆಕೃತಿ ಮತ್ತು ಆತನು ಹಿಡಿದಿರುವ ಪಾಶ, ಅಂಕುಶ, ಕಡಬು, ದಂತ ಇವು ನಮ್ಮನ್ನು ಪಾರಮಾರ್ತ ಚಿಂತನೆಗೆ ಹಚ್ಚುತ್ತದೆ. ಕಲಾವಿದರು ಗಣೇಶನ ಚಿತ್ರ, ಶಿಲ್ಪಗಳನ್ನು ವಿವಿಧ ಮಾಧ್ಯಮಗಳಲ್ಲಿ ರಚಿಸುತ್ತಾ ಬಂದಿದ್ದಾರೆ. ಈ ಪರಂಪರೆಯು ಆಯಾ ಕಾಲದಲ್ಲಿ ಲಭ್ಯವಿದ್ದ ಮಾಧ್ಯಮ ಹಾಗೂ ಪರಿಕರಗಳಲ್ಲಿ

---

೪. ಗಣಪತಿ ದರ್ಶನ ಶತವಧಾನಿ ಆರ್. ಗಣೇಶ ಅವರ ಲೇಖನ, ಪು-೪೩-೪೮

ವಿನ್ಯಾಸಗೊಳಿಸುತ್ತಾ ಬಂದಿರುವುದನ್ನು ಐತಿಹಾಸಿಕವಾಗಿ ಗುರುತಿಸಬಹುದಾಗಿದೆ.[೫] ಇಷ್ಟೆ ಅಲ್ಲದೇ ಹಲವಾರು ಭಿತ್ತಿಚಿತ್ರಗಳಲ್ಲಿ, ಹಸ್ತಪ್ರತಿಗಳಲ್ಲಿ, ಗಂಜೀಪಾ ಚಿತ್ರಗಳಲ್ಲಿ, ಗಾಜಿನ ಚಿತ್ರಗಳಲ್ಲಿ ಗಣೇಶನ ಚಿತ್ರಗಳನ್ನು ಕಾಣಬಹುದು. ಅಲ್ಲದೇ ಗಣೇಶ ಚತುರ್ಥಿಗೆ ಮಣ್ಣಿನಲ್ಲಿ ಸಿಮೆಂಟ್, ಪ್ಲಾ ಸ್ಟರ್ ಆಫ್ ಪ್ಯಾರಿಸ್‌ಗಳಲ್ಲಿ ರಚನೆಯಾಗುತ್ತಿರುವ ಶಿಲ್ಪಗಳನ್ನು ಇಂದಿಗೂ ಕಾಣಬಹುದಾಗಿದೆ. ಹೀಗೆ ಗಣೇಶನ ಚಿತ್ರ, ಶಿಲ್ಪಗಳು ವಿವಿಧ ಮಾಧ್ಯಮಗಳಲ್ಲಿ ರಚನೆಯಾಗಿವೆ.

### ದೃಶ್ಯಕಲೆಗಳ ವೈವಿಧ್ಯತೆ ಮತ್ತು ಹರವು

ಕಲೆ ಎನ್ನುವುದು ಮಾನವನ ವೈಶಿಷ್ಟ್ಯ. ನಮ್ಮ ಸುತ್ತಲಿನ ಹಾಗೂ ದೈನಂದಿನ ಜನಜೀವನಗಳು ಜನಸಾಮಾನ್ಯರಲ್ಲಿ ಪ್ರಭಾವ ಬೀರುವಂತೆ ಕಲಾವಿದನ ಮನಸ್ಸಿನ ಮೇಲೂ ಪ್ರಭಾವ ಬೀರುತ್ತದೆ. ಕಲೆಯು ವಿಶ್ವದ ಪ್ರತಿಯೊಂದು ಜೀವ–ನಿರ್ಜೀವ ರಾಶಿಗಳಲ್ಲಿ ಹಾಸುಹೊಕ್ಕಾಗಿ ಬೆರೆತಿರುವ ಒಂದು ದಿವ್ಯ ಚೇತನ. ಕಲೆಯ ಆಶ್ರಯದಿಂದಲೇ, ಸಂಸ್ಕೃತಿಯಿಂದಲೇ ಉತ್ಪತ್ತಿ ಉತ್ತಮ ಜೀವಿತ. ಕಲೆ ಎಂಬ ಮಾತು ನೆನೆಯುವುದೇ, ಸ್ಮರಿಸುವುದೇ ಅತ್ಯಂತ ಆಧರಣೆಯ ಕಲೆ ಎಂಬುದು ವ್ಯಕ್ತಿಯ ಜೀವನದಲ್ಲಿ ಪ್ರವೇಶಿಸದೇ ಇದ್ದರೆ ಆತನ ಜೀವನವೇ ಬರುಡು ಬರುಡಾಗುತ್ತಿತ್ತು.[೬] ಕಲೆಯು ಮನುಷ್ಯನ ಜೀವನದ ಒಂದು ಅಂಗವಾದ್ದರಿಂದ ಮನಸ್ಸಿನಲ್ಲಾದ ತುಡಿತಗಳನ್ನು ಹೊರಹಾಕುವುದಕ್ಕೆ ಒಂದು ಮಾಧ್ಯಮ ಮಾತ್ರವಾಗಿದೆ. ಮಾನವನ ದೈಹಿಕ, ಶಾರೀರಿಕ ಮತ್ತು ಮಾನಸಿಕವಾದ ಚಿಂತನೆಗಳನ್ನು ಹೊರಹಾಕುವುದೇ ಕಲೆ ಎಂದು ನಾವು ಭಾವಿಸುತ್ತೇವೆ. ಇದರಲ್ಲಿ ಕಲೆ ಎಂಬ ಪದವು ಬಹಳ ವಿಸ್ತಾರವಾದದ್ದು. ವಿದ್ವಾಂಸರು ಕಲೆ ಎಂಬ ಪದವನ್ನು ಪಾರಮಾರ್ತ ಚಿಂತನೆಗೆ ಒಳಪಡಿಸುತ್ತಾರೆ. ಇದರಲ್ಲಿ ನಡೆಯುವುದು ಒಂದು ಕಲೆ, ಮಾತನಾಡುವುದು ಒಂದು ಕಲೆ, ಚಿತ್ರ ಬಿಡಿಸುವುದು ಒಂದು ಕಲೆ, ನೋಡುವುದು ಒಂದು ಕಲೆ ಹೀಗೆ ಹೇಳುವಾಗ ನೋಡುವುದು ಎಂದಾಕ್ಷಣ ಸಹೃದಯಿ ಎಂದು ಕರೆಯುತ್ತೇವೆ. ಯಾವುದೇ ಕಲೆಗಳನ್ನು ಆಸ್ವಾಧಿಸಬೇಕಾದರೆ ಸಹೃದಯನಿಗೆ ಮಾತ್ರ ಸಾಧ್ಯ. ಕಲೆಗಳನ್ನು ಆಸ್ವಾಧಿಸುವಾಗ ಮತ್ತು ಆನಂದಿಸುವಾಗ ಅದರಲ್ಲಿಯ ಅರ್ಥವನ್ನು ಹುಡುಕುವುದರಿಂದ ಆನಂದವನ್ನು ಪಡೆಯಲು ಸಾಧ್ಯವಿಲ್ಲ. ಅದರಲ್ಲಿಯ ವಸ್ತುಗಳನ್ನು ಗುರುತಿಸುವಲ್ಲಿ ಆನಂದ ಸಿಗುವುದಿಲ್ಲ. ಆದರೆ ಅದರಲ್ಲಿಯ ವಸ್ತುಗಳ ಜೊತೆಗೆ ಹಾಗೂ ಅದರಲ್ಲಿಯ ಸನ್ನಿವೇಶಗಳ ಜೊತೆಜೊತೆಗೆ ತನ್ನ ಅನುಭವಗಳನ್ನು ಮೇಳೈಸಿ ಆತನ ಅನುಭವಗಳನ್ನು ಪುನರ್ ಅನುಭವಿಸುವಲ್ಲಿ ಆನಂದ ಪಡೆಯಬಹುದು.[೭]

ಕಲೆಗಳಲ್ಲಿ ಹಲವಾರು ರೀತಿಯ ವೈವಿಧ್ಯತೆಗಳು ಕಂಡುಬರುತ್ತವೆ. ಎಲ್ಲ ಕಲೆಗಳೂ ಸೌಂದರ್ಯವನ್ನು ನಿರೂಪಿಸುತ್ತವೆ. ಸೌಂದರ್ಯ ಎಂಬುದು ತೀರ ಪರಿಚಿತ ಶಬ್ದ, ಆದರೆ ಲಕ್ಷಣದ ಹಿಡಿತಕ್ಕೆ ಸುಲಭವಾಗಿ ಸಿಗಲಾರದ ಕಲ್ಪನೆ. ಇದರಿಂದ ಕಲೆಗಳ ಸಾಮಾನ್ಯ ಲಕ್ಷಣಗಳನ್ನು

---

೫. ವಿಜಯ ಸೆಪ್ಟಂಬರ್ ೦೨.೦೮.೨೦೧೧ ಡಾ. ಎಸ.ಸಿ. ಪಾಟೀಲ ಅವರ ಲೇಖನ, ಗಜಮುಖ–ಪು–೩

೬. ಲೇಖಕರು–ಡಾ. ಕೆ. ಕುಮಾರ, ಲಲಿತಕಲೆಗಳು ಮತ್ತು ತತ್ವಶಾಸ್ತ್ರ ಮತ್ತು ಸೌಂದರ್ಯಶಾಸ್ತ್ರ,–ಪು–೧

೭. ಶಂಕರ ಪಾಟೀಲ, ಚಿತ್ರಾಂತರಂಗ ಲೇಖಕರು –ಪು.ಸಂ–೧೨

ತಿಳಿಹೇಳುವ ಸೌಂದರ್ಯ ಪದವೇ ವಿಲಕ್ಷಣವೆಂಬಂತೆ ತೋರುತ್ತದೆ. ಯಾಕೆ ಒಂದು ವಸ್ತು ಸುಂದರವಾಗಿದೆ ಎಂಬುದು ನಮಗೆಂದೂ ನಿಖರವಾಗಿ ಗೊತ್ತಾಗದೆಂದು ಅನಬೋಲ್ ಫ್ರಾನ್ಸ್ ಹೇಳಿದನು. ಇನ್ನೊಬ್ಬ ಪಾಶ್ಚಾತ್ಯ ವಿದ್ವಾಂಸನಾದ ಪ್ಲೇಟೋ ಶಿವದಲ್ಲಿಯೇ ಸುಂದರವನ್ನು ಸೇರಿಸಿ ಬಿಟ್ಟನು. ಅರಿಸ್ಟಾಟಲ್‌ನು ಸೌಂದರ್ಯವೆಂದರೆ ಸಮಬಂಧ, ಪ್ರಮಾಣ ಬದ್ಧತೆ, ಒಂದುಗೂಡಿದ ಇಡೀಯದರಲ್ಲಿ ಒಳಗೊಂಡ, ಬಿಡಿಯವಗಳ ಸಮಕಟ್ಟು ಎಂದು ಹೇಳಿದನು. ಮುಂದಿನ ತತ್ವ ಶೋಧಕರು ವಿವಿಧ ರೀತಿಯಲ್ಲಿ ಸೌಂದರ್ಯ ಸ್ವರೂಪದ ಶೋಧವನ್ನು ನಡೆಸಿದರು.[೮] ಇಂತಹ ಸೌಂದರ್ಯ ಸ್ವರೂಪದ ಶೋಧನೆಯ ಜೊತೆಗೆ ಕಲೆಯ ವಿವಿಧ ಆಯಾಮಗಳನ್ನು ತಿಳಿಸಿದರು.

ಹಲವಾರು ಸೌಂದರ್ಯಶಾಸ್ತ್ರಜ್ಞರು ೬೪ ಕಲೆಗಳು ಎಂದು ಹೇಳಿದರು. ಎಲ್ಲೆಲ್ಲಿ ಕೌಶಲ್ಯ ಇರುತ್ತದೆಯೋ ಅದೆಲ್ಲ ಕಲೆ ಎಂದು ಕರೆಸಿಕೊಂಡಿತು. ಆಧುನಿಕ ಕಾಲದಲ್ಲಿ ಲಲಿತಕಲೆ ಮತ್ತು ಲಲಿತೇತರ ಕಲೆ ಎಂದು ಎರಡು ಮುಖ್ಯ ವಿಭಾಗಗಳಾಗಿ ವಿಂಗಡಿಸಲಾಯಿತು. ಲಲಿತಕಲೆಗಳು ಸೌಂದರ್ಯ ನಿರ್ಮಾಣವನ್ನು ನಿರ್ವೇತುಕವಾದ ಆನಂದ ಪಡೆಯುವುದಕ್ಕೆ ಮತ್ತು ಕೊಡುವುದಕ್ಕೆ ಇರುತ್ತವೆ. ಅಂದರೆ ಕಲೆಯ ಮೂಲ ಸ್ವರೂಪ ಅವುಗಳಲ್ಲಿ ಇರುತ್ತವೆ. ಕಲೆಗಳ ಮೂಲ ಉದ್ದೇಶ ಸಂತೋಷ, ಆನಂದವನ್ನು ಕೊಡುವುದು. ಲಲಿತೇತರ ಕಲೆಗಳಲ್ಲಿ ಸೌಂದರ್ಯ ನಿರ್ಮಾಣವು ಸಹೇತುಕವು ಸೌಂದರ್ಯ ನಿಷ್ಠವು ಆಗಿರುತ್ತವೆ. ಲಲಿತಕಲೆಗಳು ಉಪಯುಕ್ತವಲ್ಲ ಎಂದು ಹೇಳಲಾಗದು. ಹಾಗೆ ಲಲಿತೇತರ ಕಲೆಗಳು ಸೌಂದರ್ಯದಾಯಕ ಮತ್ತು ಆನಂದದಾಯಕವಲ್ಲ ಎಂದು ಹೇಳಲಾಗದು. ಆದರೆ ಅವು ರಚನೆಯ ಮೇಲೆ ಬೇರೆ ಬೇರೆಯಾಗಿರುತ್ತವೆ. ಅಂದವಾದ ಮನೆಯನ್ನು ಕಟ್ಟುವುದು ಲಲಿತೇತರ ಕಲೆಯಾದರೆ ಕಟ್ಟಿದ ಮನೆಗೆ ಚಿತ್ರಗಳಿಂದ, ಶಿಲ್ಪಗಳಿಂದ ಅಲಂಕರಿಸುವುದು ಲಲಿತಕಲೆಯಾಗಿವೆ.[೯] ಲಲಿತಕಲೆಗಳು ಮತ್ತು ಲಲಿತೇತರ ಕಲೆಗಳು ಎಂದು ಅಧ್ಯಯನ ದೃಷ್ಟಿಯಿಂದ ಬೇರೆ ಬೇರೆ ವಿಧಾನಗಳಲ್ಲಿ ಅಧ್ಯಯನ ಮಾಡಲಾಗಿದೆ. ಆಭರಣ ಕಲೆ, ಜಾಹಿರಾತುಗಳು, ಕುಂಬಾರಿಕೆ, ಕಂಬಾರಿಕೆ, ಬಡಿಗತನ, ನೇಕಾರಿಕೆ, ಭಿತ್ತಿ ಪತ್ರಗಳು ಮುಂತಾದವುಗಳನ್ನು ಲಲಿತೇತರ ಕಲೆಗಳು ಎನ್ನುತ್ತೇವೆ. ಈ ಕಲೆಗಳು ಉಪಯೋಗದ ದೃಷ್ಟಿಯಿಂದ ನಿರ್ಮಾಣವಾಗಿರುತ್ತವೆ. ಲಲಿತಕಲೆಗಳು ಒಟ್ಟು ಏಳು ಚಿತ್ರಕಲೆ, ಶಿಲ್ಪಕಲೆ, ಸಾಹಿತ್ಯ, ಸಂಗೀತ, ನಾಟಕ, ನೃತ್ಯ ಹಾಗೂ ವಾಸ್ತುಶಿಲ್ಪಗಳನ್ನು ಲಲಿತಕಲೆಗಳೆಂದು ಕರೆಯುತ್ತೇವೆ. ಲಲಿತಕಲೆಗಳ ಅಭಿವ್ಯಕ್ತಿ ವಿಧಾನದಲ್ಲಿ ಮೂರು ರೀತಿಗಳಿವೆ. ಕಾವ್ಯ ಹಾಗೂ ನಾಟಕಗಳನ್ನು ಶ್ರವ್ಯ ಕಲೆಗಳು ಎನ್ನುತ್ತೇವೆ. ನಾಟಕ ದೃಶ್ಯವೂ ಆಗಬಹುದು. ನೃತ್ಯ ಹಾಗೂ ಸಂಗೀತಗಳನ್ನು ಅಭಿನಯ ಕಲೆಗಳು ಎನ್ನುತ್ತೇವೆ. ಅಂತೆಯೇ ಚಿತ್ರ, ಶಿಲ್ಪ ಹಾಗೂ ವಾಸ್ತುಶಿಲ್ಪಗಳನ್ನು ದೃಶ್ಯಕಲೆಗಳು ಎನ್ನುತ್ತೇವೆ.[೧೦] ದೃಶ್ಯ ಎಂದರೆ ಕಣ್ಣಿಗೆ ಗೋಚರಿಸುವಂತದ್ದು.

---

೮. ಪಿ.ಆರ್. ತಿಪ್ಪೇಸ್ವಾಮಿ, ಚಿತ್ರಕಲಾ ಪ್ರಪಂಚ, ಪ್ರಧಾನ (ಸಂ)–ಡಾ. ರಂ.ಶ್ರೀ. ಮುಗಳಿ ಅವರ ಲೇಖನ–ಪು–೪೦೩
೯. ಪಿ.ಆರ್. ತಿಪ್ಪೇಸ್ವಾಮಿ, ಚಿತ್ರಕಲಾ ಪ್ರಪಂಚ, ಪ್ರಧಾನ (ಸಂ)–ಡಾ. ರಂ.ಶ್ರೀ. ಮುಗಳಿ ಅವರ ಲೇಖನ–ಪು–೪೦೫
೧೦. ಚಿ.ಸು.ಕೃಷ್ಣಸೆಟ್ಟಿ, ಜನಪ್ರಿಯ ಕಲಾಮಾಲಿಕೆ ದೃಶ್ಯಕಲೆ ಎಂದರೇನು?–ಪು–೫

ನಾಟಕ, ಚಿತ್ರ, ಶಿಲ್ಪ, ನೃತ್ಯ ಹೀಗೆ ಇದರಲ್ಲಿ ಕಾಲಬದ್ಧ ಕಲೆಗಳು ಮತ್ತು ದೇಶಬದ್ಧ ಕಲೆಗಳು ಎಂದು ಎರಡು ರೀತಿಯಲ್ಲಿ ವಿಂಗಡಿಸುತ್ತೇವೆ. ದೇಶಬದ್ಧ ಕಲೆಗಳು ಒಂದು ನಿರ್ದಿಷ್ಟವಾದ ಸ್ಥಳದಲ್ಲಿದ್ದು ಅವುಗಳು ಯಾವಾಗಲೂ ನೋಡಲು, ಅನುಭವಿಸಲು ಸಿಗುವುದರಿಂದ ಇವುಗಳನ್ನು ದೇಶಬದ್ಧ ಕಲೆಗಳು ಎಂದು ಕರೆಯುತ್ತೇವೆ. ಇವುಗಳಲ್ಲಿ ಚಿತ್ರ, ಶಿಲ್ಪ ಮತ್ತು ವಾಸ್ತುಶಿಲ್ಪ. ಕಾಲಬದ್ಧ ಕಲೆಗಳು ಇವುಗಳು ಆ ಕಾಲಕ್ಕೆ ಅನುಗುಣವಾಗಿ ಪ್ರದರ್ಶನಗೊಳ್ಳುತ್ತವೆ. ಆ ವೇಳೆಯಲ್ಲಿ ಮಾತ್ರ ಅನುಭವಿಸಲು, ಆನಂದಿಸಲು ಸಾಧ್ಯ. ಆದ್ದರಿಂದ ಇವುಗಳನ್ನು ಕಾಲಬದ್ಧ ಕಲೆಗಳು ಎನ್ನುತ್ತೇವೆ. ಇದರಲ್ಲಿ ಸಂಗೀತ, ನಾಟಕ, ನೃತ್ಯ, ಕಾಲಬದ್ಧ ಕಲೆಗಳಲ್ಲಿ ಚಲನೆಯಿದ್ದು ಕಥೆ ಅಥವಾ ಘಟನೆಗಳಿಗೆ ಅನುಕ್ರಮವಾಗಿ ಸಾಗುವ ಕ್ರಿಯೆ ಇರುತ್ತದೆ. ಇಲ್ಲಿ ಹಾಡನ್ನು ಕೇಳುವಾಗ, ಪುಸ್ತಕವನ್ನು ಓದುವಾಗ ಹಾಡು ಸಾಗಿದಂತೆ ಮತ್ತು ಪುಸ್ತಕದ ಓದು ಸಾಗಿದಂತೆ ಹಿಂದಿನ ಘಟನೆಗಳು ತಕ್ಷಣಕ್ಕೆ ನಮ್ಮ ಮುಂದೆ ಇರುವುದಿಲ್ಲ. ಆದ್ದರಿಂದ ಇವು ಕಾಲಬದ್ಧ ಕಲೆಗಳು. ಆದರೆ ದೇಶಬದ್ಧ ಕಲೆಗಳಲ್ಲಿ ಒಂದು ಘಟನೆಯಿಂದ ಇನ್ನೊಂದು ಘಟನೆಗೆ ಸಾಗುವ ಕ್ರಿಯೆ ಇರುವುದಿಲ್ಲ. ಇವು ಶಾಶ್ವತವಾಗಿ ಒಂದು ಸ್ಥಳವನ್ನು ಆಧರಿಸಿಕೊಂಡಿರುತ್ತವೆ. ಕಾಲಬದ್ಧ ಕಲೆಗಳಲ್ಲಿ ಕೃತಿಗೆ ಹಿಂಚಲನೆ ಇರುವುದಿಲ್ಲ. ದೇಶಬದ್ಧ ಕೆಲಗಳಲ್ಲಿ ಮುಂದಕ್ಕೆ, ಹಿಂದಕ್ಕೆ, ಮೇಲಕ್ಕೆ ನೋಡುಗನ ಆಪೇಕ್ಷೆಯಂತೆ ಸಾಗಿ ಅನುಭವಿಸಲು, ಆನಂದಿಸಲು ಸಾಧ್ಯವಾಗುತ್ತದೆ. ಇವುಗಳನ್ನು ಇನ್ನೊಂದು ರೀತಿಯಲ್ಲಿ ವಿವರಿಸುತ್ತಾರೆ. ಪ್ರದರ್ಶನ ಕಲೆಗಳು ಮತ್ತು ಪ್ರದರ್ಶನಾತ್ಮಕ ಕಲೆಗಳು ಎಂದೂ ಸಹ ಕರೆಯುವುದುಂಟು. ಪ್ರದರ್ಶನ ಕಲೆಗಳು ಚಿತ್ರ, ಶಿಲ್ಪ, ವಾಸ್ತುಶಿಲ್ಪ, ಪ್ರದರ್ಶನಾತ್ಮಕ ಕಲೆಗಳು ನಾಟಕ, ಸಂಗೀತ, ನೃತ್ಯ, ಅಭಿನಯ ಹೀಗೆ ವಿವಿಧ ರೀತಿಯಲ್ಲಿ ಕರೆಯುವುದು ಕಂಡುಬರುತ್ತದೆ. ಇನ್ನು ಸಂಮಿಶ್ರ ಕಲೆಗಳು, ಪರಿಶುದ್ಧ ಕಲೆಗಳು ಎಂದು ಎರಡು ರೀತಿಯಲ್ಲಿ ವಿಂಗಡಿಸುತ್ತಾರೆ. ವಾಸ್ತುಶಿಲ್ಪ ಪರಿಶುದ್ಧ ಕಲೆ ಇದರೊಡನೆ ಮೂರ್ತಿಶಿಲ್ಪ, ಚಿತ್ರಕಲೆ ಸೇರಿಕೊಂಡು ಸಂಮಿಶ್ರವಾಗುತ್ತದೆ. ಸಂಗೀತದೊಡನೆ ಸಾಹಿತ್ಯ ಸೇರಿಕೊಂಡು ನೃತ್ಯಕ್ಕೆ ಸಹಕಾರಿಯಾದಾಗ ಸಂಮಿಶ್ರವಾಗುತ್ತದೆ.

ಇನ್ನೂ ಕೆಲವು ಕಲೆಗಳನ್ನು ನಾವು ವಾಣಿಜ್ಯ ಕಲೆಗಳು, ಕರಕುಶಲ ಕಲೆಗಳು ಎಂದು ಕರೆಯುತ್ತೇವೆ. ವಾಣಿಜ್ಯ ಎನ್ನುವ ಮಾತಿನಲ್ಲಿ ವ್ಯವಹಾರಿಕ ದೃಷ್ಟಿ ಇರುತ್ತದೆ. ಈ ದೃಷ್ಟಿಯಲ್ಲಿ ರಚನೆಯಾಗುವಂತ ಕಲೆಗಳನ್ನು ನಾವು ವಾಣಿಜ್ಯ ಕಲೆಗಳು ಎನ್ನಬಹುದು. ಕರಕುಶಲ ಕಲೆಗಳು ಎಂದು ಸಹ ಕರೆಯುತ್ತೇವೆ. ಇದರಲ್ಲಿ ಕಂಬಾರಿಕೆ, ಕುಂಬಾರಿಕೆ, ಆಭರಣಗಳ ತಯಾರಿಕೆ, ಬಡಿಗತನ, ನೇಕಾರಿಕೆ ಇವು ವ್ಯಾಪಾರ ದೃಷ್ಟಿಯಿಂದ ರಚನೆಯಾಗುವಂತವು. ಇಂತಹ ಕಲೆಗಳಲ್ಲಿ ಹಲವಾರು ರೀತಿಯ ಕಲೆಗಳು ಉದ್ಭವಿಸುತ್ತವೆ. ಈ ಕಲೆಗಳನ್ನು ವಿವಿಧ ಜನಾಂಗದವರು ಕೆಲವು ಕಲೆಗಳನ್ನು ವೃತ್ತಿಯಾಗಿಸಿಕೊಂಡು ಅವುಗಳನ್ನು ನಿರಂತರವಾಗಿ ಬೆಳೆಸಿಕೊಂಡು ಬಂದರು. ಕೆಲವು ದೇವರ ಮೂರ್ತಿಗಳನ್ನು ಕಲ್ಲಿನಲ್ಲಿ, ಕಟ್ಟಿಗೆಯಲ್ಲಿ, ಮಣ್ಣಿನಲ್ಲಿ ಹೀಗೆ ಹಲವಾರು ಮಾಧ್ಯಮಗಳಲ್ಲಿ ರಚಿಸುತ್ತಾ ಬಂದಿರುವುದನ್ನು ಇಂದಿಗೂ ಕಾಣಬಹುದು.

ಕರಕುಶಲ ಕಲೆಗಳನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ನೋಡುವುದಾದರೆ ಮಾನವನ ವಿಕಾಸದಲ್ಲಿಯೇ ಕಾಣಬಹುದು. ಕರಕುಶಲ ಕಲೆಗಳ ವಿಕಾಸಕ್ಕೂ, ಮಾನವನ ಬುದ್ಧಿ ಭಾವಗಳ ಬೆಳವಣಿಗಗೂ ನೇರ ಸಂಬಂಧವಿದೆ. ಒಂಟಿಯಾಗಿ ಜೀವಿಸುತ್ತಿದ್ದ ಮಾನವನು ಕುಟುಂಬ ಜೀವಿಯಾದ ಕುಟುಂಬ ಜೀವಿಯಾಗಿದ್ದವನು ಗುಂಪು ಜೀವಿಯಾದ. ಮುಂದೆ ಗ್ರಾಮಜೀವಿಯಾದ, ಪಟ್ಟಣ–ನಗರ ಜೀವಿಯಾದನು. ಈ ಎಲ್ಲ ಹಂತಗಳಲ್ಲಿ ಭಾವಜೀವಿಯಾಗಿ, ಬುದ್ಧಿಜೀವಿಯಾಗಿ ಹಲವಾರು ಸಂಬಂಧ–ಸಂಪರ್ಕಗಳನ್ನು ವಿಸ್ತರಿಸಿಕೊಂಡು ತನ್ನ ಬದುಕುವಿಕೆ, ಇರುವಿಕೆಗಳಲ್ಲಿ ಪರಿವರ್ತನೆಗಳನ್ನು ಕಾಣುತ್ತಾ ಇಂದಿನವರೆಗೂ ಬೆಳೆಯುತ್ತಲೆ ಬಂದಿದ್ದಾನೆ. ಪ್ರತಿ ಹಂತದ ಸಂದರ್ಭದಲ್ಲಿ ಅವನಿಂದ ರೂಪಗೊಳ್ಳುತ್ತಾ ಬಂದ ಕಲೆ ಕರಕುಶಲ ಕಲೆಗಳ ಮೇಲೆ ದಟ್ಟ ಪರಿಣಾಮ ಬೀರಿತು. ಹೀಗೆ ಕರಕುಶಲ ಕಲೆಗಳು ಕೂಡಾ ಮಾನವನೊಂದಿಗೆ ವಿಕಾಸ ಹೊಂದುತ್ತಾ ಇಲ್ಲಿಯವರೆಗೂ ಬೆಳೆದುಬಂದಿವೆ. ಹೀಗೆ ಕಲೆಗಳು ವೈವಿಧ್ಯತೆಯನ್ನು ಕಂಡಿವೆ.

**ಹರವು**

ದೃಶ್ಯಕಲೆಗಳ ಹರವು ತುಂಬಾ ದೊಡ್ಡದಾಗಿದ್ದು, ಇದನ್ನು ಪ್ರಾಗೈತಿಹಾಸಿಕ ಕಾಲದಿಂದ ವಿವರಿಸಬಹುದಾಗಿದೆ. ದೃಶ್ಯಕಲೆಗಳು ಮಾನವನ ಜೊತೆ ಜೊತೆಯಲ್ಲಿಯೇ ಬೆಳೆದುಬಂದವುಗಳಾಗಿವೆ. ಕಲೆಯು ಹಲವಾರು ರೀತಿಯಲ್ಲಿ ಬೆಳೆದು ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಪ್ರಾಕೃತಿಕ ಕಾರಣಗಳ ಹಿನ್ನೆಲೆಯಲ್ಲಿ ವೈವಿಧ್ಯಮಯವಾಗಿ ಬೆಳೆದುಬಂದಿವೆ.

ಪ್ರಾಗೈತಿಹಾಸಿಕ ಕಾಲದಲ್ಲಿ ಕುಟ್ಟುವ ಮತ್ತು ಕೊರೆಯುವ ಮೂಲಕ ಪ್ರಾರಂಭವಾಗಿ ಮುಂದೆ ಸಸ್ಯಮೂಲ, ಪ್ರಾಣಿಮೂಲ, ಖನಿಜಮೂಲಗಳಿಂದ ಪಡೆದ ಬಣ್ಣಗಳಿಂದ ರಚನೆಯಾಗತೊಡಗಿದವು ಎಂದು ಸಂಶೋಧಕರ ಊಹೆ. ಆದಿಮಾನವನು ಕಲೆಯನ್ನು ಭಾಷೆಯನ್ನಾಗಿಸಿಕೊಂಡಿದ್ದನು ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ. ಹೀಗೆ ಕಲೆಯು ಮಾನವನ ಜೊತೆ ಜೊತೆಯಲ್ಲಿಯೇ ಬೆಳೆದು ಕ್ರಿ.ಶ. ಕಾಲಕ್ಕೆ ಕಾಲಿಡುತ್ತಿದ್ದಂತೆ ಚಿತ್ರ, ಶಿಲ್ಪಕಲೆಗಳು ಒಂದು ಉನ್ನತ ಸ್ಥಿತಿಯ ಮಟ್ಟವನ್ನು ತಲುಪಿದವು. ಆ ವೇಳೆಗೆ ಹೆಚ್ಚು ನಾಗರಿಕತೆಯನ್ನು ಹೊಂದಿದ ಜನರು ಇಂತಹ ಕಲೆಗಳನ್ನು ತಮ್ಮ ಧರ್ಮದ ಹಿನ್ನೆಲೆಯಲ್ಲಿ ಕಲೆಯನ್ನು ಬೆಳೆಸತೊಡಗಿದರು. ದೃಶ್ಯಕಲೆಗಳಾದ ಚಿತ್ರ, ಶಿಲ್ಪ, ಸಾಹಿತ್ಯ, ಸಂಗೀತ, ನಾಟಕ ಹಲವಾರು ಕಲೆಗಳನ್ನು ಬೆಳೆಸಿದರು. ಈ ವೇಳೆಯಲ್ಲಿ ಚಿತ್ರ ಮತ್ತು ಶಿಲ್ಪಕಲೆಗೆ ಹೆಚ್ಚು ಪ್ರೋತ್ಸಾಹಿಸಿ ಕಲೆಯನ್ನು ಬೆಳೆಸತೊಡಗಿದರು. ಹಲವಾರು ಕಲೆಗಳಿಗೆ ಸಂಬಂಧಿಸಿದಂತೆ ಸಾಹಿತ್ಯ ಗ್ರಂಥಗಳು ರಚನೆಯಾದವು.

ವಿಜಯನಗರದ ಪತನದ ನಂತರ ವಿವಿಧ ಕಲೆಗಳು ರಾಜಾಶ್ರಯ ಪಡೆದವು. ವಿವಿಧ ಪ್ರದೇಶದ ಹೆಸರುಗಳಿಂದ ಕರೆಸಿಕೊಂಡು ಬ್ರಿಟೀಷ್‌ರ ಆಗಮನದಿಂದ ರಾಜಾಶ್ರಯ ತಪ್ಪಿದವು. ಮುಂದೆ ೧೮ನೇ ಶತಮಾನದಲ್ಲಿ ನವ್ಯ ಕಲೆಗಳ ಪ್ರಭಾವ ಬೀರಿತು. ಮುಂದೆ ನವ್ಯಕಲಾ

ಪಂಥಗಳು ಹುಟ್ಟಿಕೊಂಡವು. ಕಲಾ ಪಂಥಗಳು ಕಲೆಗಳನ್ನು ವಿಭಿನ್ನ ರೀತಿಯಲ್ಲಿ ಬೆಳೆಸಿದವು. ಹೀಗೆ ಕಲೆಯು ವಿಸ್ತಾರವಾಗಿರುವುದರಿಂದ ಇದರ ವ್ಯಾಪ್ತಿಯನ್ನು ಸೀಮಿತಗೊಳಿಸಲು ಸಾಧ್ಯವಾಗುವುದಿಲ್ಲವಾಗಿದೆ.

**********

## ಅಧ್ಯಾಯ - ಮೂರು

# ಮಣ್ಣಿನ ಮಾಧ್ಯಮದಲ್ಲಿ ಗಣೇಶನ ಶಿಲ್ಪಗಳು

ಹಲವಾರು ಮಾಧ್ಯಮಗಳಲ್ಲಿ ರಚನೆಯಾಗುತ್ತಿರುವ ಕಲಾಕೃತಿಗಳನ್ನು ಮತ್ತು ವಸ್ತುಗಳನ್ನು ನಾವು ಕಲೆ ಎಂಬ ಅರ್ಥದಲ್ಲಿ ಪರಿಗಣಿಸುತ್ತೇವೆ. ಕಲೆ ಎಂಬ ಅರ್ಥವು ಬಹಳ ವಿಸ್ತಾರವಾಗಿದ್ದು ಕಲೆಯ ಅರ್ಥವನ್ನು ಶಿಲ್ಪ, ಚಿತ್ರ, ನಾಟಕ, ಸಾಹಿತ್ಯ, ಸಂಗೀತ, ನೃತ್ಯ, ಅಭಿನಯ ಮತ್ತು ಇತರ ವಸ್ತುಗಳ ಸೃಷ್ಠಿಯಲ್ಲಿ ಕಾಣುತ್ತೇವೆ. ರಸಾನುಭವವನ್ನು ಉಂಟುಮಾಡಬಹುದಾದ ಯಾವುದೇ ರಚನೆ ಅಥವಾ ಸೃಷ್ಠಿಯನ್ನು ನಾವು ಕಲೆ ಎಂದು ಗುರುತಿಸುತ್ತೇವೆ. ಕಲೆಗಳ ಮಾತು ಬಂದಾಗಲೆಲ್ಲ ಅರವತ್ನಾಲ್ಕು ಕಲೆಗಳು ಎಂದು ಹೇಳುವುದು ರೂಢಿಯಾಗಿದೆ. ಅರವತ್ನಾಲ್ಕು ಕಲೆಗಳು ಮಾನವನ ಪ್ರತಿ ಹಂತದಲ್ಲೂ ಒಂದಿಲ್ಲೊಂದು ರೂಪದಲ್ಲಿ ಪ್ರಕಟಗೊಳ್ಳುವ ಕಲೆಗಳೆ ಆಗಿವೆ.[೧]

ಕಲೆಗಳು ಮಾನವನ ಪ್ರತಿಯೊಂದು ಹಂತದಲ್ಲಿ ಅವನು ಮಾಡುವ ಕಾಯಕದ ಮೇಲೆ ಅವಲಂಬಿತವಾಗಿರುತ್ತವೆ. ಕಲೆಯೂ ಮಾನವನ ಹುಟ್ಟಿನೊಂದಿಗೆ ಬೆಳೆದು ಅವನ ಜೊತೆಯಲ್ಲಿಯೇ ನಾಗರಿಕತೆಯನ್ನು ಕಂಡಿದೆ. ಮಾನವನು ಕಲೆಯನ್ನು ವಿವಿಧ ರೀತಿಯಲ್ಲಿ ತನ್ನ ಕೆಲಸಗಳಲ್ಲಿ ಬಳಸಿಕೊಳ್ಳುತ್ತಾ ಬೆಳೆಸಿಕೊಂಡು ಬಂದಿದ್ದಾನೆ. ವಿವಿಧ ಹಂತಗಳಲ್ಲಿ, ವಿವಿಧ ರೀತಿಯಲ್ಲಿ ಬಳಸಿಕೊಂಡು ಕೆಲವು ಕಲೆಗಳನ್ನು ಜೀವನದ ವೃತ್ತಿಯಾಗಿಸಿಕೊಂಡಿದ್ದಾನೆ. ಬೇರೆ ಬೇರೆ ಕಲೆಗಳು, ಬೇರೆ ಬೇರೆ ಜನಾಂಗಗಳನ್ನು ಗುರುತಿಸುವಷ್ಟು ರೀತಿಯಲ್ಲಿ ವೈವಿಧ್ಯತೆಯನ್ನು ಕಂಡಿವೆ. ಕಲೆಗಳು ಕಲ್ಲು, ಕಟ್ಟಿಗೆ, ಮಣ್ಣು, ಕಂಚು, ಚಿನ್ನ ಮತ್ತು ಬೆಳ್ಳಿ ಹೀಗೆ ವಿವಿಧ ಮಾಧ್ಯಮಗಳಲ್ಲಿ ರಚನೆಯಾಗುತ್ತ ಬಂದಿವೆ. ಇಂತಹ ಕಲೆಗಳನ್ನು ಒಟ್ಟುಗೂಡಿಸಿ ಕರಕುಶಲ ಕಲೆಗಳು ಎಂದು ಸಹ ಕರೆದಿದ್ದಾರೆ.

---

೧. ಕರಿಗೌಡ ಬೀಚನಹಳ್ಳಿ, ಕರಕುಶಲ ಕಲೆಗಳು, (ಸಂ), ಬಿ.ಕೆ. ಹಿರೇಮಠ ಅವರ ಲೇಖನ–ಪು–೧

ಕರಕುಶಲ ಕಲೆಗಳು ವಿವಿಧ ಜನಾಂಗಗಳು ರೂಢಿಸಿಕೊಂಡ ವೃತ್ತಿಗಳಾಗಿವೆ. ಬಡಿಗೇರರು ಕಟ್ಟಿಗೆಯನ್ನು ಬಳಸಿಕೊಂಡು ವಿವಿಧ ವಸ್ತುಗಳನ್ನು ರಚಿಸುತ್ತಾರೆ. ಕುಂಬಾರರು ಮಣ್ಣನ್ನು ಬಳಸಿಕೊಂಡು ಪಾತ್ರೆಗಳನ್ನು ಮತ್ತು ವಿವಿಧ ವಸ್ತುಗಳನ್ನು ರಚಿಸುತ್ತಾರೆ. ಕಲ್ಲನ್ನು ಬಳಸಿಕೊಂಡು ಕೆಲವು ದೇವರ ಮೂರ್ತಿಗಳನ್ನು ರಚಿಸುತ್ತಾರೆ. ಪತ್ತಾರರು ಚಿನ್ನ, ಬೆಳ್ಳಿಯನ್ನು ಬಳಸಿಕೊಂಡು ಹಲವಾರು ಆಭರಣಗಳನ್ನು ರಚಿಸುತ್ತಾರೆ. ಹೀಗೆ ಬೇರೆ ಬೇರೆ ಜನಾಂಗದವರು ವಸ್ತುಗಳನ್ನು ರಚಿಸುತ್ತಾ ಬಂದಿರುವುದನ್ನು ನಾವು ನೋಡುತ್ತೇವೆ. ಆದರೆ ಎಲ್ಲ ಜನಾಂಗದವರು ದೇವರ ಶಿಲ್ಪಗಳನ್ನು ರಚಿಸಿ ಪೂಜಿಸುತ್ತಾ ಬಂದಿರುವುದನ್ನು ಗಮನಿಸಬೇಕಾಗುತ್ತದೆ.

ಒಂದು ಮಾಧ್ಯಮದಿಂದ ಇನ್ನೊಂದು ಮಾಧ್ಯಮದಲ್ಲಿ ದೇವತಾ ವಿಗ್ರಹಗಳನ್ನು ಬೇರೆ ಬೇರೆಯಾಗಿ ರಚಿಸುತ್ತಾ ಬಂದಿದ್ದಾರೆ. ಮರದಿಂದ ಮಾಡಿದ ವಿಗ್ರಹಗಳನ್ನು ಸದಾ ಮನೆಯಲ್ಲಿಟ್ಟು ಪೂಜಿಸಬಹುದು. ಕಲ್ಲಿನಲ್ಲಿ ಮಾಡಿದ ವಿಗ್ರಹಗಳನ್ನು ದೇವಾಲಯಗಳಲ್ಲಿ ಪ್ರತಿಷ್ಠಾಪಿಸಲ್ಪಡತಕ್ಕವು. ಲೋಹದಿಂದ ಮತ್ತು ಚಿನ್ನ, ಬೆಳ್ಳಿಗಳಲ್ಲಿ ರಚಿಸಿದ ಮೂರ್ತಿಗಳು ಉತ್ಸವಾದಿಗಳಲ್ಲಿ ಉಪಯೋಗಿಸತಕ್ಕವು. ಮಣ್ಣಿನಲ್ಲಿ ಮಾಡಿದ ಮೂರ್ತಿಗಳು ತಾತ್ಕಾಲಿಕವು ಆಗಿದ್ದರಿಂದ ಪೂಜೆಯಾದ ನಂತರ ವಿಸರ್ಜಿಸತಕ್ಕವು.[೨] ಮಾನವನ ಬದುಕನ್ನು ರೂಪಿಸಿಕೊಳ್ಳುವಲ್ಲಿ ಮಣ್ಣಿನ ಪಾತ್ರ ಪ್ರಮುಖವಾಗಿದೆ. ಮಣ್ಣಿನಲ್ಲೆ ಹುಳ ಬೆಳೆದು ಸಾಯುವುದು ಸಹಜವಾದ ಮಾತಾಗಿದೆ. ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿರುವುದು ಮಣ್ಣನ್ನು ಪೂಜಿಸುವುದು. ಮಣ್ಣನ್ನು ನಂಬಿ ಮಣ್ಣಿನಿಂದ ಬದುಕಿನ ಮಣ್ಣಿನೆಗೆ ಮುಂದೆ ಹೊನ್ನು ಅಣ್ಣಯ್ಯ, ಮಣ್ಣೇ ಲೋಕದಲ್ಲಿ ಬೆಳೆಯಾದ್ದು. ಹೀಗೆ ಪ್ರಾಚೀನರು ನಮ್ಮ ನಾಡಲ್ಲಿ ಮಣ್ಣಿಗೆ ಹೆಚ್ಚಿನ ಸ್ಥಾನಮಾನ ನೀಡಿದ್ದಾರೆ. ದೇ.ಜ.ಗೌ. ಹೇಳುವಂತೆ ಮಣ್ಣು ಸಂಪತ್ತನ್ನು ಹೇರುವ ಜೀವಶಕ್ತಿ. ಮಣ್ಣು ಹೊನ್ನುಗಳೆರಡು ರೈತನ ಪಾಲಿಗೆ ಅಬೇದ ವಸ್ತುಗಳು. ದುಡಿಯುವ ಬಾಯಿಗೆ ಮಣ್ಣೇ ಹೊನ್ನಾಗಿ ಪರಿಣಮಿಸುತ್ತದೆ. ಈ ಮಾತು ಮಣ್ಣಿನ ಮಹತ್ವವನ್ನು ತಿಳಿಸುತ್ತದೆ.

ಮಡಿಕೆಯ ಮಾಡುವವರು ಮಣ್ಣೆ ಮೊದಲು ಎಂಬ ಮಾತಿನಂತೆ ಮನುಷ್ಯನಿಗೆ ಸೌಂದರ್ಯಪ್ರಜ್ಞೆ ಉಂಟಾಗತೊಡಗಿಸಲು ಮಣ್ಣು ಮೊದಲು ಮಾಧ್ಯಮವಾಗಿ ಬಳಕೆಯಾಗಿರಲು ಇದು ಉಪಯುಕ್ತವಾಗಿದೆ. ಮಡಿಕೆಯ ಮಾಡುವವರು ಮಣ್ಣೆ ಮೊದಲು ಎಂಬ ಮಾತಿಗೆ ಮಣ್ಣನ್ನು ಮೊದಲು ವಸ್ತುಗಳ ತಯಾರಿಕೆಗೆ ಮತ್ತು ದೇವರ ಮೂರ್ತಿಗಳ ತಯಾರಿಕೆಗೆ ಬಳಸಿಕೊಂಡಿದ್ದರೆಂಬ ಉದಾಹರಣೆಗಳನ್ನು ಹರಪ್ಪಾ ಮತ್ತು ಮೆಹೆಂಜೋದಾರೊಗಳ ಉತ್ಖನನದಲ್ಲಿ ದೊರೆತ ಕಲಾತ್ಮಕ ಪಾತ್ರೆಗಳು, ಮಕ್ಕಳಾಟಿಕೆಗಳು ಮುಂತಾದ ಮಣ್ಣಿನ ಶಿಲ್ಪಗಳ ರಚನೆಯ ಪ್ರಾಚೀನತೆಯಲ್ಲಿ ಕಂಡುಕೊಳ್ಳಬಹುದಾಗಿದೆ.[೩] ಇನ್ನು ಪುರಾಣಗಳನ್ನು ನೋಡಿದಾಗ ಮಣ್ಣಿನಲ್ಲಿ ದೇವರ ಮೂರ್ತಿಗಳನ್ನು ತಯಾರಿಸಿದ ಉದಾಹರಣೆಗಳಿವೆ. ಶಿವ ಪುರಾಣದ ಪ್ರಕಾರ ಪಾರ್ವತಿಯು ತನ್ನ ಮೈಮಲದಿಂದಲೋ,

---

೨. ಪಿ.ಆರ್. ತಿಪ್ಪೇಸ್ವಮಿ (ಪ್ರ.ಸಂ), ಶಿಲ್ಪಕಲಾ ಪ್ರಪಂಚ, ಕೆ. ಭುಜಬಲ ಶಾಸ್ತ್ರೀ ಅವರ ಲೇಖನ ಪು-೪೪

ಮಣ್ಣಿನಿಂದಲೋ ಗಣೇಶನ ಮೂರ್ತಿಯನ್ನು ಮಾಡಿದ ಉದಾಹರಣೆಗಳು ಕಂಡುಬರುತ್ತವೆ. ಇದರ ಪ್ರಕಾರ ಇಂದಿಗೂ ಸಹ ಮಣ್ಣಿನಲ್ಲಿ ಗಣೇಶನ ವಿಗ್ರಹಗಳನ್ನು ರಚಿಸಿ, ಪೂಜಿಸಿ ವಿಸರ್ಜಿಸುವುದು ರೂಢಿಯಲ್ಲಿದೆ. ಗಣೇಶನನ್ನು ರಚಿಸದ ಕಲಾವಿದನೇ ಇಲ್ಲ ಎನ್ನುವರಷ್ಟರಮಟ್ಟಿಗೆ ಗಣೇಶನನ್ನು ಕಲೆಯಲ್ಲಿ ವಿವಿಧ ರೀತಿಯಲ್ಲಿ ಬಳಸಿಕೊಂಡಿರುವುದು ಮತ್ತು ಸೌಂದರ್ಯದ ಹಿನ್ನೆಲೆಯಲ್ಲಿ ನೋಡಿರುವುದು ಕಂಡುಬರುತ್ತದೆ.

### ೧. ಡೋಲು ಬಾರಿಸುತ್ತಿರುವ ಗಣಪ

ಈ ಕಲಾಕೃತಿಯು ೨೦೧೧ರಲ್ಲಿ ರಚನೆಯಾಗಿದ್ದು, ಅರ್ಧ ಅಡಿ ಎತ್ತರದಲ್ಲಿದೆ. ಇದು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ.[೪] ಮಣ್ಣಿನ ಶಿಲಾಕೃತಿಯಲ್ಲಿ ಡೋಲು ಬಾರಿಸುತ್ತಿರುವ ಗಣಪತಿಯನ್ನು ಕಾಣಬಹುದು. ಗಣಪನು ಕಿವಿ, ಕಿರೀಟ, ದಂತಗಳು, ಕಣ್ಣುಗಳು ಸುಂದರವಾಗಿ ಕಾಣುತ್ತಿದ್ದ ತನ್ನ ಸೊಂಡಿಲಿನಿಂದ ಡೋಲನ್ನು ಹಿಡಿದುಕೊಂಡು ತನ್ನ ಎರಡು ಕೈಗಳಿಂದ ಡೋಲನ್ನು ಬಾರಿಸುತ್ತಿರುವುದನ್ನು ಕಾಣುತ್ತೇವೆ. ಕುಳಿತ ಗಣಪ ತನ್ನ ಕಾಲುಗಳನ್ನು ಮುಂದೆ ಚಾಚಿಕೊಂಡು ಕುಳಿತಿದ್ದು ತನ್ನ ತೊಡೆಯ ಮೇಲೆ ಡೋಲನ್ನು ಇಟ್ಟು ಹೊಡೆಯುತ್ತಿರುವುದನ್ನು ಕಾಣುತ್ತೇವೆ. ಡೋಲಿನ ಮೇಲೆ ವಿವಿಧ ರೀತಿಯ ರೇಖೆಗಳಿಂದ ಅಲಂಕರಿಸಿದ್ದು, ನೋಡುಗರಿಗೆ ಸುಂದರವಾಗಿ ಕಾಣಿಸುತ್ತದೆ. ಸಾಮಾನ್ಯವಾಗಿ ಜನರು ಗಣಪನನ್ನು ಈ ರೀತಿ ನೋಡುವುದು ಬಹಳ ಕಡಿಮೆ. ಆಧುನಿಕ ಸಮಕಾಲೀನ ಕಲಾವಿದರು ಗಣಪತಿಯ ಚಿತ್ರ ಮತ್ತು ಶಿಲ್ಪದ ಮೇಲೆ ನಾನಾ ರೀತಿಯ ಪ್ರಯೋಗಗಳನ್ನು ಮಾಡುತ್ತಾ ಭಿನ್ನವಿಭಿನ್ನ ಮಾಧ್ಯಮದಲ್ಲಿ ರಚನೆ ಮಾಡುತ್ತಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಚಿತ್ರದಲ್ಲಿ ಗಣಪತಿ ಡೋಲನ್ನು ನುಡಿಸಿಕೊಂಡು ಆನಂದ ಪಡುತ್ತಿರುವುದನ್ನು ಕಾಣುತ್ತೇವೆ.

### ೨. ಹೂದಾನಿಯ ಮೇಲೆ ಅಲಂಕಾರಿಕ ಗಣಪತಿ

ಈ ಶಿಲ್ಪವು ಹತ್ತು ಇಂಚು ಎತ್ತರದಲ್ಲಿದ್ದು, ೨೦೧೧ರಲ್ಲಿ ರಚನೆಯಾಗಿದೆ. ಇದು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ.[೫] ಮಣ್ಣಿನ ಕಲಾಕೃತಿಯಲ್ಲಿ ಹೂದಾನಿಯ ಮೇಲೆ ಅಲಂಕಾರಿಕ ಗಣಪತಿಯಾಗಿ ಈ ಶಿಲ್ಪವನ್ನು ಉಪಯೋಗಿಸಿಕೊಂಡಿದ್ದಾರೆ. ಇತ್ತೀಚಿನ ಕಾಲಘಟ್ಟದಲ್ಲಿ ಸಮಾಜದಲ್ಲಿನ ಜನರು ಸೌಂದರ್ಯಕ್ಕೆ ಹೆಚ್ಚಿನ ಆಧ್ಯತೆ ನೀಡುತ್ತಿರುವುದರಿಂದ ಕಲಾವಿದರುಗಳು ಹೂದಾನಿಗಳ ಮೇಲೆ ಅಲಂಕಾರ ಮಾಡುವುದು ಮತ್ತು ದೇವಾನುದೇವತೆಗಳ ಚಿತ್ರ, ಶಿಲ್ಪಗಳನ್ನು ರಚಿಸುತ್ತಿರುವುದನ್ನು ಕಾಣುತ್ತೇವೆ.

ಆ ನಿಟ್ಟಿನಲ್ಲಿ ನೋಡಿದರೆ ಈ ಮೇಲೆ ಕಾಣುವಂತ ಹೂದಾನಿಯ ಮೇಲೆ ಹೂವು ಮತ್ತು ಎಲೆಗಳನ್ನು ಉಪಯೋಗಿಸಿಕೊಂಡು ವಿನ್ಯಾಸ ಮಾಡಿರುವುದನ್ನು ಕಾಣುತ್ತೇವೆ. ಇಲ್ಲಿ ಹಸನ್ಮುಖಿಯಾಗಿ

---

೩. ಶಿವಾನಂದ ಬಂಟನೂರ "ಉತ್ತರ ಕರ್ನಾಟಕದ ಜನಪದ ಶಿಲ್ಪಕಲೆ" ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕ.ವಿ.ವಿ. ಹಂಪಿ ಪು-೪೦-೪೧

೪. ಈ ಕಲಾಕೃತಿಯು ಸದ್ಯ ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿ ಸಂಗ್ರಹಗೊಂಡಿದೆ.

೫. ಈ ಕಲಾಕೃತಿಯು ಸದ್ಯ ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿ ಸಂಗ್ರಹವಾಗಿದೆ.

ಕಾಣುವಂತಹ ಗಣಪತಿ ಕಣ್ಣು, ಸೊಂಡಿಲು, ಕಿವಿ, ಕಿರೀಟಗಳು ಸರಳವಾಗಿ ರಚಿಸಿದ್ದು, ತನ್ನ ಸೊಂಡಿಲನ್ನು ಮುಂದಕ್ಕೆ ಚಾಚಿಕೊಂಡು ಕುಳಿತಿರುವುದನ್ನು ನೋಡುತ್ತೇವೆ. ಬಲಗೈಯಿಂದ ಆಶೀರ್ವದಿಸುವ ಮತ್ತು ಎಡಗೈಯನ್ನು ತನ್ನ ಎಡ ಗಾಲಿನ ಮೇಲೆ ಇರಿಸಿಕೊಂಡಿರುವುದನ್ನು ಕಾಣುತ್ತೇವೆ. ಸೊಂಟಕ್ಕೆ ವೃತ್ತಾಕಾರದ ವಿನ್ಯಾಸವನ್ನು ತೊಟ್ಟಿದ್ದು ಕುಳಿತುಕೊಂಡಿರುವಂತೆ ರಚಿಸಿದ್ದಾರೆ. ಒಟ್ಟಾರೆ ಈ ಗಣಪತಿಯ ಶಿಲ್ಪವನ್ನು ಗಮನಿಸಿದರೆ ಸೌಂದರ್ಯದ ಹಿನ್ನೆಲೆಯಲ್ಲಿ ರಚನೆ ಮಾಡಿದ್ದಾರೆ ಎನ್ನಬಹುದಾಗಿದೆ.

**೩. ಪೇಟಿ ಬಾರಿಸುತ್ತಿರುವ ಗಣೇಶ**

ಈ ಶಿಲ್ಪಕಲಾಕೃತಿಯು ೨೦೧೨ರಲ್ಲಿ ರಚನೆಯಾಗಿದ್ದು, ೫ ಇಂಚು ಎತ್ತರದಲ್ಲಿದೆ. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ.[೬] ಮಣ್ಣಿನ ಶಿಲ್ಪಾಕೃತಿಯಲ್ಲಿ ಪೇಟಿಯನ್ನು ಬಾರಿಸುತ್ತಿರುವ ಗಣಪತಿಯನ್ನು ಕಾಣುತ್ತೇವೆ. ದುಂಡುತನದಿಂದ ಕೂಡಿದ ಮುದ್ದಾದ ಮುಖ. ಅರ್ಧ ಚಂದ್ರನಂತೆ ಕೊರೆದಿರುವ ಆ ಹುಬ್ಬುಗಳು, ಸುಂದರವಾದಂತಹ ನಯನಗಳು, ನೆತ್ತಿಯ ಮೇಲೆ ಅರ್ಧ ಚಂದ್ರಾಕೃತಿಯಂತೆ ಹೋಲುವ ಆಕಾರ, ದೊಡ್ಡ ದೊಡ್ಡ ಗಾತ್ರದಿಂದ ಕೂಡಿದಂತಹ ಕಿವಿಗಳು, ಒಂದು ದಂತ ಮುರಿದು ಮತ್ತೊಂದು ದಂತ ಮುರಿಯದೆ ಇರುವುದನ್ನು ಕಾಣುತ್ತೇವೆ. ತನ್ನ ಸೊಂಡಿಲದಿಂದ ಪೇಟಿಯನ್ನು ನುಡಿಸುತ್ತಿದ್ದು ಒಂದು ಕೈಯಲ್ಲಿ ಹಿಡಿದಿದ್ದು ಮತ್ತೊಂದು ಕೈಯಲ್ಲಿ ಬಾರಿಸುತ್ತಿರುವುದನ್ನು ಕಾಣುತ್ತೇವೆ. ಕುಳಿತ ಗಣಪ ತನ್ನ ಎರಡು ಕಾಲುಗಳನ್ನು ಮುಂದಿಟ್ಟು ಅದರ ಮೇಲೆ ಪೇಟಿಯನ್ನು ಇಟ್ಟು ಬಾರಿಸುತ್ತಿರುವುದನ್ನು ಕಾಣುತ್ತೇವೆ. ಒಟ್ಟಾರೆ ಈ ಶಿಲ್ಪವನ್ನು ನೋಡಿದರೆ ಗಣಪತಿಯು ನಾದದಲ್ಲಿ ತಲ್ಲೀನನವಾದಂತೆ ತೋರುತ್ತದೆ.

**೪. ಕುಳಿತ ಗಣೇಶ**

ಈ ಕೃತಿಯು ಅರ್ಧ ಅಡಿ ಎತ್ತರದಲ್ಲಿದ್ದು, ೨೦೧೨ರಲ್ಲಿ ರಚನೆಯಾಗಿದ್ದು ಕನ್ನಡ ವಿಶ್ವವಿದ್ಯಾಲಯದ ಸಂಗ್ರಹದಲ್ಲಿದೆ.[೭] ಮಣ್ಣಿನ ಶಿಲ್ಪಾಕೃತಿಯಲ್ಲಿ ಕುಳಿತು ವಿಶ್ರಾಂತಿಯನ್ನು ಪಡೆಯುತ್ತಿರುವ ಗಣೇಶನನ್ನು ಕಾಣುತ್ತೇವೆ. ಇಲ್ಲಿ ಗಣೇಶನ ಮುಖವನ್ನು ಸ್ವಲ್ಪ ದೊಡ್ಡ ಗಾತ್ರದಲ್ಲಿ ರಚಿಸಿದ್ದು, ಕಣ್ಣು-ಕಿವಿ ಮತ್ತು ಸೊಂಡಿಲನ್ನು ಸುಂದರವಾಗಿ ಕಾಣುವಂತೆ ರಚಿಸಿದ್ದಾರೆ. ಗಣೇಶನು ತನ್ನ ಕೊರಳಲ್ಲಿ ಶ್ಯಾಲನ್ನು ಸುತ್ತಿಕೊಂಡಿದ್ದು, ಅಂಚಿನ ಭಾಗದಲ್ಲಿ ವಿನ್ಯಾಸ ಮಾಡಿರುವುದನ್ನು ಕಾಣುತ್ತೇವೆ. ತಾನು ಸೊಂಟಕ್ಕೆ ವಿನ್ಯಾಸದ ಪಟ್ಟಿಯನ್ನು ಆಧಾರವಾಗಿಟ್ಟುಕೊಂಡಿದ್ದು ಎಡಗಡೆಯ ಕೈಯನ್ನು ತನ್ನ ಕಾಲಿನ ಮೇಲೆ ಇಟ್ಟುಕೊಂಡು ಕುಳಿತಿದ್ದಾನೆ. ಬಲಗಾಲನ್ನು ಮಡಚಿಕೊಂಡಿದ್ದು, ಎಡಗಾಲಿನ ಮೇಲೆ ಸೊಂಡಿಲಿನ ತುದಿಯನ್ನು ಇಟ್ಟುಕೊಂಡಿರುವುದನ್ನು ನೋಡುತ್ತೇವೆ. ಒಟ್ಟಾರೆಯಾಗಿ ಈ

---

೬. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ, ಹಂಪಿಯ ಕರಕುಶಲ ಮಾರಾಟ ಮಳಿಗೆಯಲ್ಲಿ ಸಂಗ್ರಗೊಂಡಿದೆ.

೭. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕರಕುಶಲ ಮಾರಾಟ ಮಳಿಗೆಯಲ್ಲಿ ಸಂಗ್ರಹಗೊಂಡಿದೆ.

ಮಣ್ಣಿನಲ್ಲಿ ತಯಾರಿಸಿದ ಮೂರ್ತಿಯನ್ನು ನೋಡಿದರೆ ವಿಶ್ರಾಂತಿ ಪಡೆಯುತ್ತಿದ್ದಾನೆಂಬುದು ಮನವರಿಕೆಯಾಗುತ್ತದೆ.

**೫. ಇಲಿಯ ಮೇಲೆ ಕುಳಿತ ಗಣೇಶ**

ಈ ಕಲಾಕೃತಿಯನ್ನು ರಾಜಕುಮಾರ ಮಾಲಗತ್ತಿ ಎಂಬುವವರು ೨೦೦೪ರಲ್ಲಿ ರಚನೆ ಮಾಡಿದ್ದು, ಮಣ್ಣಿನ ಶಿಲಾಕೃತಿಯಲ್ಲಿ ಇಲಿಯ ಮೇಲೆ ಕುಳಿತು ಆಶೀರ್ವದಿಸುತ್ತಿರುವುದನ್ನು ಕಾಣಬಹುದು. ಗಣಪತಿಯ ಮುಖದಲ್ಲಿ ಕಣ್ಣುಗಳು ಸುಂದರವಾಗಿದ್ದು, ಅವನ ಸೊಂಡಿಲನ್ನು ಎಡ ಭಾಗಕ್ಕೆ ಮಡಚಿಕೊಂಡಿದ್ದು, ಕಿವಿಗಳನ್ನು ಅಗಲವಾಗಿ ಕೆತ್ತಿದ್ದು ಕೇಶವಿನ್ಯಾಸವನ್ನು ಮಾಡಿ ತುರುಬನ್ನು ಕಟ್ಟಿಕೊಂಡಿರುವುದು ಈ ಶಿಲ್ಪದಲ್ಲಿ ಕಂಡುಬರುತ್ತದೆ. ಕೊರಳಲ್ಲಿ ಹಾರವನ್ನು, ಕೈಗಳಿಗೆ ಕೈಕಡಗವನ್ನು ಹಾಕಿಕೊಂಡಿದ್ದು, ಬಲಗೈಯಿಂದ ಆಶೀರ್ವದಿಸುತ್ತಿರುವುದನ್ನು ಕಾಣುತ್ತೇವೆ.

ತನ್ನ ಬಲಗಾಲನ್ನು ಮಡಚಿಕೊಂಡು, ಎಡಗಾಲನ್ನು ಕೆಳಗೆ ಇಟ್ಟುಕೊಂಡಿದ್ದು ತನ್ನ ಎರಡು ಕಾಲುಗಳಿಗೆ ಕಾಲ್ಬಳೆಗಳನ್ನು ತೊಟ್ಟಿರುವುದನ್ನು ಕಾಣುತ್ತೇವೆ. ಸೊಂಟಕ್ಕೆ ಸುತ್ತಿರುವಂತಹ ಪಂಜೆಯ ನಿರಿಗೆಗಳನ್ನು ಅತಿ ಸೂಕ್ಷ್ಮವಾಗಿ ರಚಿಸಿರುವುದು ಈ ಶಿಲ್ಪದಲ್ಲಿ ಕಂಡುಬರುತ್ತದೆ. ಇಲಿಯು ತನ್ನ ಮುಖವನ್ನು ಗಣಪತಿ ಕುಳಿತಿರುವ ಆ ತೂಕಕ್ಕೆ (ಬಾರಕ್ಕೆ) ಮುಖವನ್ನು ಮೇಲೆ ಮಾಡಿಕೊಂಡು ಕುಳಿತಿದ್ದು, ತನ್ನ ಕಿವಿಯನ್ನು ಮೇಲಕ್ಕೆತ್ತಿಕೊಂಡಿದ್ದು ಕೊರಳಿಗೆ ಸರವನ್ನು ಹಾಕಿದ್ದು ಮುಂದಿನ ಎಡಗಾಲನ್ನು ಮಡಚಿಕೊಂಡು ಕುಳಿತಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಶಿಲ್ಪಾಕೃತಿಯು ಅತಿ ಸುಂದರವಾಗಿ ಮೂಡಿಬಂದಿದೆ. ಈ ಕಲಾಕೃತಿಯು ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ಸಂಗ್ರಹದಲ್ಲಿದೆ.[೮]

**೬. ಪಣತಿಯ ಅಲಂಕಾರಿಕ ಗಣೇಶ**

ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯ ಸಂಗ್ರಹದಲ್ಲಿದ್ದು, ೨೦೧೧ರಲ್ಲಿ ರಚನೆಯಾಗಿದೆ.[೯] ಮಣ್ಣಿನ ಶಿಲ್ಪಾಕೃತಿಯಲ್ಲಿ ಗಣೇಶನನ್ನು ಒಂದು ಕೊಡದ ಮೇಲೆ ಕುಳಿತಿದ್ದು, ಆಶೀರ್ವದಿಸುವಂತೆ ರಚಿಸಿದ್ದಾರೆ. ಇಲ್ಲಿ ಮುಖವನ್ನು ದೊಡ್ಡದಾಗಿ ರಚನೆ ಮಾಡಿ ಸುಂದರವಾದಂತಹ ಕಣ್ಣುಗಳನ್ನು ರಚಿಸಿ ಹಣೆಗೆ ಅರ್ಧಚಂದ್ರಾಕೃತಿಯಂತೆ ರಚಿಸಿದ್ದಾರೆ. ಕಿವಿಗಳನ್ನು ದೊಡ್ಡದಾಗಿ ರಚಿಸಿದ್ದು ಅದರ ಸೊಂಡಿಲನ್ನು ಅತಿ ಸುಂದರವಾಗಿ ರಚಿಸಿದ್ದಾರೆ. ತಲೆಯ ಮೇಲೆ ಕಿರೀಟವು ಅತಿ ಸೂಕ್ಷ್ಮವಾಗಿ ರಚಿಸಿರುವುದನ್ನು ಕಾಣಬಹುದಾಗಿದೆ. ತನ್ನ ಎಡಗೈಯನ್ನು ತೊಡೆಯ ಮೇಲೆ ಇಟ್ಟುಕೊಂಡಿದ್ದು, ಬಲಗೈಯಿಂದ ಆಶೀರ್ವದಿಸುವಂತೆ ರಚಿಸಿದ್ದು ಹೊಟ್ಟೆಯ ಭಾಗವನ್ನು ಚಿಕ್ಕದಾಗಿ ರಚಿಸಿದ್ದಾರೆ. ಗಣಪತಿಯು ಕುಳಿತಿರುವ ಸ್ಥಳದ ಸುತ್ತಲು ಪಣತಿಗಳಿಂದ ಕೂಡಿದ್ದು ಇದು ಇನ್ನೂ ಗಣೇಶನ ಸೌಂದರ್ಯವನ್ನು ಹೆಚ್ಚಿಸುವಂತೆ ಕಾಣುತ್ತದೆ.

---

೮. ಈ ಕಲಾಕೃತಿಯು ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ ಬಾದಾಮಿಯಲ್ಲಿ ಸಂಗ್ರಹದಲ್ಲಿದೆ.

೯. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕರಕುಶಲ ಮಾರಾಟ ಮಳಿಗೆಯ ಸಂಗ್ರಹದಲ್ಲಿದೆ.

## ೭. ಕುಳಿತ ಗಣೇಶ

ಈ ಕಲಾಕೃತಿಯನ್ನು ರಾಜಕುಮಾರ ಮಾಲಗತ್ತಿ ಎಂಬುವವರು ೨೦೦೩ರಲ್ಲಿ ಗಣೇಶ ಆಚರಣೆಯ ಸಂದರ್ಭದಲ್ಲಿ ರಚನೆ ಮಾಡಿದ್ದು ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ವಸ್ತುಸಂಗ್ರಹಾಲಯದಲ್ಲಿದೆ.[೧೦] ಮಣ್ಣಿನ ಶಿಲ್ಪಕೃತಿಯಲ್ಲಿ ಕುಳಿತ ಗಣೇಶನನ್ನು ಕಾಣಬಹುದು. ಶಿಲ್ಪದಲ್ಲಿ ಗಣೇಶನ ಮುಖದಲ್ಲಿನ ಕಣ್ಣುಗಳನ್ನು ಸುಂದರವಾಗಿ ಕಿವಿಗಳನ್ನು ಅಗಲವಾಗಿ ರಚಿಸಿದ್ದಾರೆ. ತನ್ನ ಸೊಂಡಿಲನ್ನು ಎಡಕ್ಕೆ ಮಡಚಿಕೊಂಡು ಕೇಶವಿನ್ಯಾಸ ಮಾಡಿಕೊಂಡು ತುರುಬನ್ನು ರಚಿಸಿದ್ದು ಕೊರಳಿಗೆ ಸರಗಳನ್ನು, ಕೈಗಳಿಗೆ ಕೈಕಡಗವನ್ನು ಹಾಕಿಕೊಂಡಿದ್ದು, ತನ್ನ ಬಲಗೈಯಿಂದ ಆಶೀರ್ವದಿಸುತ್ತಿದ್ದ ತನ್ನ ಎಡಗೈಯನ್ನು ನೆಲಕ್ಕೆ ಊರಿಕೊಂಡು ಕುಳಿತಿದ್ದು, ತನ್ನ ಬಲಗಾಲನ್ನು ಮಡಚಿಕೊಂಡು ಇರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಶಿಲ್ಪಾಕೃತಿಯನ್ನು ಅತಿ ಸುಂದರವಾಗಿ ರಚಿಸಿರುವುದನ್ನು ಕಾಣುತ್ತೇವೆ.

## ೮. ಲಿಂಗಕ್ಕೆ ಅಪ್ಪಿಕೊಂಡಿರುವ ಗಣೇಶ

ಈ ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯ ಸಂಗ್ರಹದಲ್ಲಿದೆ.[೧೧] ಶಿಲ್ಪಾಕೃತಿಯಲ್ಲಿ ಗಣೇಶನು ಲಿಂಗವನ್ನು ಅಪ್ಪಕೊಂಡಿರುವುದನ್ನು ಕಾಣುತ್ತೇವೆ. ಇಲ್ಲಿ ಗಣಪತಿಯ ಮುಖವು ಹಸನ್ಮುಖಿಯಾಗಿದ್ದು ಸುಂದರವಾದ ಕಣ್ಣುಗಳನ್ನೊಳಗೊಂಡು, ಹಣೆಯ ಮೇಲೆ ಅರ್ಧಚಂದ್ರಾಕೃತಿಯ ರೀತಿಯಲ್ಲಿ ರಚನೆ ಮಾಡಿರುವುದನ್ನು ಕಾಣುತ್ತೇವೆ. ಕಿರೀಟವು ಸಹ ಸರಳವಾಗಿ ರಚಿಸಿದ್ದಾರೆ. ಇದರಲ್ಲಿ ವಿಶೇಷವೇನೆಂದರೆ ಸೊಂಡಿಲು ಬಲಗಡೆಗೆ ಇರುವುದನ್ನು ಕಾಣುತ್ತೇವೆ. ತನ್ನ ಎರಡು ಕೈಗಳಿಂದ ಲಿಂಗವನ್ನು ಹಿಡಿದುಕೊಂಡು ಕುಳಿತಿರುವುದನ್ನು ಕಾಣಬಹುದು. ಅದರ ಪಕ್ಕದಲ್ಲಿ ಶಲ್ಯವನ್ನು ರಚಿಸಿದ್ದು, ಬಲಗಾಲನ್ನು ರಚಿಸಿರುವುದನ್ನು ಕಾಣುತ್ತೇವೆ. ಶಿವನ ಲಿಂಗವನ್ನು ಅತಿ ಸುಂದರವಾಗಿ ರಚಿಸಿದ್ದು ಲಿಂಗದ ಮಧ್ಯದಲ್ಲಿ ಮೂರು ನಾಮಗಳನ್ನು ರಚಿಸಿದ್ದು ಅದರ ಮೇಲೆ ವೃತ್ತಾಕಾರವಾಗಿ ರಚಿಸಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಶಿಲ್ಪವು ಸುಂದರವಾಗಿ ಮೂಡಿಬಂದಿರುವುದನ್ನು ಕಾಣುತ್ತೇವೆ.

## ೯. ಅಲಂಕಾರಿಕ ಗಜಾನನ

ಇದು ೨೦೧೨ರಲ್ಲಿ ರಚನೆಯಾಗಿದ್ದು ಅರ್ಧ ಅಡಿ ಎತ್ತರದಲ್ಲಿದೆ. ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯ ಸಂಗ್ರಹದಲ್ಲಿದೆ.[೧೨] ಮಣ್ಣಿನ ಶಿಲ್ಪಾಕೃತಿಯಲ್ಲಿ ಪುಟ್ಟ ಗಣಪತಿಯು ಕುಳಿತಿರುವುದನ್ನು ಕಾಣುತ್ತೇವೆ. ಕಣ್ಣು ಮತ್ತು ಕಿವಿಗಳನ್ನು ಸುಂದರವಾಗಿ ರಚಿಸಿದ್ದು, ಕಿರೀಟವನ್ನು ಸರಳ ರೀತಿಯಲ್ಲಿ ರಚಿಸಿದ್ದಾರೆ. ಭುಜದ ಮೇಲೆ ಶ್ಯಾಲು ಇದ್ದು ಅದರ ಅಂಚಿನ ಭಾಗಕ್ಕೆ ವಿನ್ಯಾಸ ಮಾಡಿದ್ದಾರೆ. ತನ್ನ ಸೊಂಡಿಲನ್ನು ಸ್ವಲ್ಪ ಮುದುಡಿಕೊಂಡಿರುವಂತೆ ರಚಿಸಿದ್ದು ಕಾಲುಗಳಿಗೆ ಮತ್ತು

---

೧೦. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿ ಸಂಗ್ರಹದಲ್ಲಿದೆ.

೧೧.ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿ ಸಂಗ್ರಹದಲ್ಲಿದೆ.

೧೨. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿ ಸಂಗ್ರಹದಲ್ಲಿದೆ.

ಕೈಗಳಿಗೆ ಕಡಗವನ್ನು ಧರಿಸಿದ್ದು, ಗಣಪತಿಯ ಹಿಂದಿನ ಭಾಗದಲ್ಲಿ ವೃತ್ತಾಕಾರವಾಗಿ ರಚಿಸಿದ್ದು ಅದರ ಮೇಲೆ ಚಕ್ರದಂತೆ ಗೆರೆಗಳನ್ನು ಹಾಕಿದ್ದಾರೆ. ಗಜಾನನ ಮೇಲೆ ಮತ್ತು ಕೆಳಭಾಗದಲ್ಲಿ ವಿನ್ಯಾಸದಂತೆ ರಚನೆ ಮಾಡಿರುವುದನ್ನು ಕಾಣುತ್ತೇವೆ. ಅದರ ಮಧ್ಯಭಾಗದಲ್ಲಿ ಚಕ್ರದಂತೆ ರಚಿಸಿದ್ದು ಸುತ್ತಲು ಮೈವಳಿಕೆಯನ್ನು ತೆಗೆದಿರುವುದನ್ನು ನೋಡುತ್ತೇವೆ. ಒಟ್ಟಾರೆಯಾಗಿ ಈ ಬಾಲ ಅಲಂಕಾರಿಕ ಗಜಾನನ ನಗುಮುಖದಿಂದ ಕೂಡಿದವನಾಗಿದ್ದಾನೆ.

### ೧೦. ಗಿಟಾರ ಬಾರಿಸುತ್ತಿರುವ ಗಣೇಶ

ಈ ಕಲಾಕೃತಿಯು ಎಂಟು ಇಂಚು ಅಳತೆಯಲ್ಲಿದ್ದು, ೨೦೧೨ರಲ್ಲಿ ರಚನೆಯಾಗಿದೆ. ಮಣ್ಣಿನ ಶಿಲ್ಪಾಕೃತಿಯಲ್ಲಿ ವಿಭಿನ್ನವಾದ ಶಿಲ್ಪವನ್ನು ಕಾಣುತ್ತೇವೆ. ಇಲ್ಲಿ ಗಣೇಶನು ಗಿಟಾರ ಬಾರಿಸುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ದುಂಡನೆಯ ಮುಖದಿಂದ ಹಸನ್ಮುಖಿಯಾಗಿರುವ ಗಣೇಶನು ಸುಂದರವಾದ ಕಣ್ಣು ಮತ್ತು ದೊಡ್ಡದಾದಂತ ಕಿವಿಗಳನ್ನು ಹೊಂದಿದ್ದು, ಎರಡು ದಂತಗಳನ್ನು ಉಳ್ಳವನಾಗಿದ್ದರೂ ಒಂದು ದಂತ ಮುರಿದು ಬಿದ್ದಿರುವುದನ್ನು ಕಾಣುತ್ತೇವೆ. ತನ್ನ ಉದ್ದನಾದ ಸೊಂಡಿಲನಿಂದ ಗಿಟಾರವನ್ನು ತನ್ನ ಎರಡು ಕೈಗಳಿಂದ ಹಿಡಿದು ಬಾರಿಸುತ್ತಿರುವುದನ್ನು ನೋಡುತ್ತೇವೆ. ತನ್ನ ಎರಡು ಕಾಲುಗಳನ್ನು ಒಂದತ್ತಿರ ಇಟ್ಟುಕೊಂಡಿದ್ದು ಗಿಟಾರ ಬಾರಿಸುವುದರಲ್ಲಿ ತಲ್ಲೀನನಾಗಿರುವ ಗಣೇಶನನ್ನು ನೋಡುತ್ತೇವೆ. ಇದು ೨೦೧೧ರಲ್ಲಿ ರಚನೆಯಾಗಿದ್ದು, ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯ ಸಂಗ್ರಹದಲ್ಲಿದೆ.[೧೩]

### ೧೧. ಅಲಂಕಾರಿಕ ಗಣಪತಿ

ಈ ಮಣ್ಣಿನ ಶಿಲ್ಪವನ್ನು ಕಲಾವಿದನು ವಿಭಿನ್ನವಾಗಿ ರಚಿಸಿದ್ದು, ಚಿಕ್ಕ ದೇಹಕ್ಕೆ ದೊಡ್ಡದಾದಂತಹ ಆನೆ ಮುಖವನ್ನು ಜೋಡಿಸಿದಂತೆ ಕಾಣುತ್ತದೆ. ಸುಂದರವಾದ ಕಣ್ಣುಗಳು ದೊಡ್ಡ ದೊಡ್ಡ ಗಾತ್ರದ ಕಿವಿಗಳನ್ನು ಹೊಂದಿದ್ದು ತನ್ನ ಸೊಂಡಿಲನ್ನು ಎಡಗಡೆ ಸುತ್ತಿಕೊಂಡಿರುವಂತೆ ಕಾಣುತ್ತೇವೆ. "ಕೈಕಾಲು ಸಣ್ಣ ಹೊಟ್ಟೆ ಡುಮ್ಮಣ್ಣ" ಎಂಬಂತೆ ಈ ಗಣಪತಿಯನ್ನು ನೋಡಿದರೆ ದೇಹ ಸಣ್ಣದು ಶಿರಭಾಗ ದೊಡ್ಡದು ಎಂದು ಹೇಳಬಹುದು. ಯಾಕೆಂದರೆ ಚಿಕ್ಕ ಕೈಕಾಲು, ಹೊಟ್ಟೆಯನ್ನು ರಚಿಸಿದ್ದು ಇದು ಆಧುನಿಕ ಶೈಲಿಯಲ್ಲಿ ಯುವ ಕಲಾವಿದರು ರಚಿಸಿರುವುದೆಂದು ಊಹಿಸಬಹುದಾಗಿದೆ. ಒಟ್ಟಾರೆಯಾಗಿ ಈ ಶಿಲ್ಪಕೃತಿಯು ನೋಡುಗರನ್ನು ಆಕರ್ಷಿಸುತ್ತದೆ. ಇದು ೨೦೧೧ರಲ್ಲಿ ರಚನೆಯಾಗಿದ್ದು, ಕನ್ನಡ ವಿಶ್ವವಿದ್ಯಾಲಯದ ಸಂಗ್ರಹದಲ್ಲಿದೆ.[೧೪]

### ೧೨. ಅಲಂಕಾರಿಕ ಗಣಪತಿ

ಈ ಮಣ್ಣಿನ ಶಿಲ್ಪದಲ್ಲಿ ತೂಗುದೀಪದ ಮೇಲೆ ಕುಳಿತಿರುವ ಗಣಪತಿಯನ್ನು ನೋಡಬಹುದಾಗಿದೆ. ಇಲ್ಲಿ ಗಣಪತಿಯು ದೊಡ್ಡ ಗಾತ್ರದ ಮುಖವನ್ನು ಹೊಂದಿದ್ದು ತಲೆಗೆ ಪೇಟ, ಸುಂದರ ನಯನಗಳು, ದೊಡ್ಡ ಗಾತ್ರದ ಕಿವಿಗಳು, ದಂತಗಳು ಮತ್ತು ತನ್ನ ಸೊಂಡಿಲನ್ನು

೧೩. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ, ಹೊಸಪೇಟೆ ತಾ, ಬಳ್ಳಾರಿ ಜಿ

೧೪. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ, ಹೊಸಪೇಟೆ ತಾ, ಬಳ್ಳಾರಿ ಜಿ

ನೇರವಾಗಿ ಚಾಚಿ ಸ್ವಲ್ಪ ಮಡಚಿಕೊಂಡಿರುವುದನ್ನು ಕಾಣುತ್ತೇವೆ. ಇನ್ನೊಂದು ಆಶ್ಚರ್ಯವೇನೆಂದರೆ ಗಣಪತಿ ಎಂದಾಕ್ಷಣ ನೋಡುವುದು ಸೊಂಡಿಲನ್ನು ಮತ್ತು ಹೊಟ್ಟೆಯನ್ನು ಆದರೆ ಈ ಶಿಲ್ಪಗಳಲ್ಲಿ ಹೊಟ್ಟೆಯ ಭಾಗ ಸಾಮಾನ್ಯ ಜನರಿಗಿದ್ದ ಹಾಗೆ ತೋರಿಸಿದ್ದಾರೆ. ತನ್ನ ಎರಡು ಕಾಲುಗಳನ್ನು ಒಂದು ಕಡೆ ಇಟ್ಟುಕೊಂಡು ಕುಳಿತಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಹೇಳಬೇಕಾದರೆ ಈ ಮಣ್ಣಿನ ಮಾಧ್ಯಮದಲ್ಲಿ ರಚಿಸಿದ ಚಿಕ್ಕ-ಪುಟ್ಟ ಗಣಪತಿಗಳು ಸುಂದರವಾಗಿ ರಚಿಸಿರುವುದನ್ನು ನಾವು ನೋಡಬಹುದಾಗಿದೆ. ಈ ಕಲಾಕೃತಿಯು ಅರ್ಧ ಅಡಿ ಎತ್ತರದಲ್ಲಿದ್ದು, ೨೦೧೨ರಲ್ಲಿ ರಚನೆಯಾಗಿದೆ. ಇದು ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿದೆ.[೧೫]

### ೧೩. ಜ್ಯೋತಿ ಬೆಳಗಿಸುವ ಪಣತಿಗೆ ಒರಗಿರುವ ಗಣೇಶ

ಈ ಶಿಲ್ಪವು ಐದು ಇಂಚು ಎತ್ತರದಲ್ಲಿದ್ದು, ೨೦೧೧ರಲ್ಲಿ ರಚನೆಯಾಗಿದೆ. ಮಣ್ಣಿನ ಶಿಲ್ಪವನ್ನು ನೋಡಿದರೆ ಬಾಲಗಣಪನು ಪಣತಿಯನ್ನು ಹಿಡಿದುಕೊಂಡು ನಿಂತಿರುವುದನ್ನು ಕಾಣುತ್ತೇವೆ. ಗಣಪನು ತನ್ನ ಸೌಂದರ್ಯಯುತವಾಗಿರುವ ಕಿವಿಗಳು, ಸುಂದರವಾಗಿರುವ ನಯನಗಳು, ಅರ್ಧಚಂದ್ರನಾಕಾರದಂತೆ ಹೊಳೆಯುತ್ತಿರುವ ಕಣ್ಣಿನ ಹುಬ್ಬು ಮತ್ತು ಹಣೆಯ ಮೇಲೆ ಗುರುತು, ಸರಳ ರೀತಿಯಿಂದ ಕೂಡಿದಂತಹ ರೂಮಾಲು (ಕಿರೀಟ), ಚಿಕ್ಕದಾಂತಹ ದಂತಗಳು ತನ್ನ ಸೊಂಡಿಲನ್ನು ಎಡಭಾಗಕ್ಕೆ ಮಡಚಿಕೊಂಡಿದ್ದು ತನ್ನ ಪುಟ್ಟ ಕೈಗಳಿಂದ ಪಣತಿಯನ್ನು ಹಿಡಿದಿರುವುದನ್ನು ಕಾಣುತ್ತೇವೆ. ಈ ಶಿಲ್ಪವು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯ ಸಂಗ್ರಹದಲ್ಲಿದೆ.[೧೬]

### ೧೪. ಸೌಂದರ್ಯದಲ್ಲಿ ಗಣಪತಿ

ಈ ಕೃತಿ ೨೦೧೨ರಲ್ಲಿ ರಚನೆಯಾಗಿದ್ದು ಅರ್ಧ ಅಡಿ ಎತ್ತರದಲ್ಲಿದೆ.ಮಣ್ಣಿನ ಶಿಲ್ಪಾಕೃತಿಯನ್ನು ಸೌಂದರ್ಯದ ಹಿನ್ನೆಲೆಯಿಂದ ಇದನ್ನು ರಚಿಸಿದ್ದಾರೆ. ಇಂತಹ ಶಿಲ್ಪಗಳನ್ನು ಕಲಾವಿದರು ರಚಿಸುವುದರಿಂದ ಸಾಮಾನ್ಯ ಜನರು ಸಹ ಖರೀದಿ ಮಾಡಿ ತಮ್ಮ ಮನೆಯ ಸೌಂದರ್ಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಮತ್ತು ಗಣಪತಿಯನ್ನು ಪೂಜಿಸುವ ನಿಟ್ಟಿನಲ್ಲಿ ಇಂತಹ ಶಿಲ್ಪಗಳನ್ನು ರಚನೆ ಮಾಡುತ್ತಾರೆ. ಇಲ್ಲಿ ಗಣಪತಿಯು ಕುಳಿತ ಭಂಗಿಯಲ್ಲಿದ್ದು, ಕಣ್ಣು, ಹಣೆಯ ಮೇಲೆ ನಾಮ ಸರಳವಾಗಿದ್ದು ಕಿರೀಟವೂ ಸಹ ನೋಡುಗರನ್ನು ಆಕರ್ಷಿಸುವಂತೆ ಮಾಡುತ್ತದೆ. ಈ ಶಿಲ್ಪವನ್ನು ನೋಡಿದರೆ ಬಾಲಗಣಪನಂತೆ ಕಾಣುವುದರಿಂದ ಆಕರ್ಷಕವಾಗಿದ್ದು ಗಣಪತಿಯ ಶಿಲ್ಪ ರಚನೆ ಮಾಡುವುದರಿಂದ ಇದರ ಬೇಡಿಕೆ ಹೆಚ್ಚಾಗಿ ಮತ್ತು ಸೌಂದರ್ಯಯುತವಾಗಿ ಕಾಣುತ್ತದೆ. ಗಣಪತಿಯ ಹಿಂಬದಿಯಲ್ಲಿ ಮೂರು ನಾಮಗಳಂತೆ ಮೈವಳಿಕೆಯನ್ನು ತೆಗೆದಿರುವುದನ್ನು ಸುಂದರವಾಗಿ ಕಾಣಿಸುತ್ತದೆ. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ.[೧೭]

---

೧೫. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ, ಹೊಸಪೇಟೆ ತಾ, ಬಳ್ಳಾರಿ ಜಿ
೧೬. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ, ಹೊಸಪೇಟೆ ತಾ, ಬಳ್ಳಾರಿ ಜಿ
೧೭. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ, ಹೊಸಪೇಟೆ ತಾ, ಬಳ್ಳಾರಿ ಜಿ

### ೧೫. ಹೇರಂಬ ಗಣಪತಿ

ಈ ಶಿಲ್ಪವು ನಾಲ್ಕು ಇಂಚು ಎತ್ತರವಿದ್ದು, ೨೦೧೧ರಲ್ಲಿ ರಚನೆಯಾಗಿದೆ. ಮಣ್ಣಿನ ಶಿಲ್ಪವನ್ನು ನೋಡಿದರೆ ರಾವಣನ ನೆನಪಾಗುತ್ತದೆ. ಆದರೆ ಈ ಮೇಲಿನ ಶಿಲ್ಪದಲ್ಲಿ ಶಿಲ್ಪ ಕಲಾವಿದನು ಐದು ತಲೆಗಳನ್ನೊಳಗೊಂಡ ಒಂದೇ ದೇಹದ ಗಣಪತಿಯನ್ನು ಕಾಣಬಹುದಾಗಿದೆ. ಈ ಐದು ಮುಖಗಳ ದುಂಡನೆಯಾಕಾರದಿಂದ ಕೂಡಿದ್ದು ಕಣ್ಣು, ಕಿವಿ ಮತ್ತು ಕಿರೀಟವನ್ನು ಸರಳವಾಗಿ ಮತ್ತು ಸುಂದರವಾಗಿ ರಚಿಸಿದ್ದಾರೆ. ಮುಖಗಳ ಎಡ ಮತ್ತು ಬಲಭಾಗದಲ್ಲಿ ದೊಡ್ಡ ಕೈಗಳನ್ನು ರಚಿಸಿದ್ದು, ಬಲಭಾಗದ ಕೈಯನ್ನು ಆಶೀರ್ವದಿಸುವಂತೆ ರಚಿಸಿದ್ದಾರೆ. ಕೊರಳಿಗೆ ಉದ್ದನೆಯ ಸರವನ್ನು ಹಾಕಿರುವಂತೆ ರಚಿಸಿದ್ದು, ತನ್ನ ಎರಡು ಕಾಲುಗಳನ್ನು ಮಡಚಿಕೊಂಡು ಕುಳಿತಿರುವುದನ್ನು ಕಾಣುತ್ತೇವೆ. ಗಣಪತಿಯು ವೃತ್ತಾಕಾರದಿಂದ ಕೂಡಿದ ಮಣ್ಣಿನ ಚಕ್ರದಂತಿರುವುದರ ಮೇಲೆ ಕುಳಿತಿರುವುದನ್ನು ಕಾಣುತ್ತೇವೆ. ಈ ಕಲಾಕೃತಿಯು ಕನ್ನಡ ವಿಶ್ವವಿದ್ಯಾಲಯದ ಕರಕುಶಲ ಮಾರಾಟ ಮಳಿಗೆಯಲ್ಲಿದೆ.[೧೮]

### ೧೬. ನಿಸರ್ಗದಲ್ಲಿ ಗಣಪತಿ

ಈ ಶಿಲ್ಪವನ್ನು ದಾನಯ್ಯ ಚೌಕಿಮಠ ಅವರು ೨೦೦೯ರಲ್ಲಿ ರಚನೆ ಮಾಡಿದ್ದು, ಈ ಶಿಲ್ಪವು ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದಲ್ಲಿ ಗೋಡೆಯ ಮೇಲೆ ಅಂಟಿಸಲಾಗಿದ್ದು, ೨X೪ ಅಳತೆಯಲ್ಲಿದೆ.[೧೯] ಮಣ್ಣಿನ ಭಿತ್ತಿಶಿಲ್ಪವನ್ನು ಗಮನಿಸಿದರೆ ಒಟ್ಟು ನಿಸರ್ಗ, ಅದರ ಮಧ್ಯ ಗಣಪತಿಯಿರುವುದನ್ನು ಕಾಣುತ್ತೇವೆ. ಇಲ್ಲಿ ಮೋಡ, ಆಕಾಶ, ಭೂಮಿ, ನೀರು, ಬೆಂಕಿಯನ್ನು ಈ ಭಿತ್ತಿಶಿಲ್ಪದಲ್ಲಿ ತೋರಿಸಿದ್ದಾರೆ. ಇಲ್ಲಿನ ವಿಶೇಷತೆ ಎಂದರೆ ಗಣಪತಿಯ ಕಿರೀಟವು ವಿಭಿನ್ನವಾಗಿರುವುದನ್ನು ಕಾಣುತ್ತೇವೆ. ಗಣಪತಿಯ ಸೊಂಡಿಲು ಎಡಭಾಗಕ್ಕಿದ್ದು ತನ್ನ ಬಲಗೈಯಿಂದ ಆಶೀರ್ವದಿಸುವಂತೆ ರಚಿಸಿದ್ದಾರೆ. ದೊಡ್ಡ ಗಾತ್ರದ ಹೊಟ್ಟೆಯನ್ನು ಹೊಂದಿರುವ ಈ ಗಣಪನು ಪರಿಸರದಲ್ಲಿ ಆನಂದವನ್ನು ಸವಿಯುತ್ತಿದ್ದಂತೆ ಕಾಣುತ್ತದೆ. ಈ ಭಿತ್ತಿಶಿಲ್ಪದಲ್ಲಿಯೂ ಸಹ ಮೇಲಿನ ಭಾಗದಲ್ಲಿ ಸೂರ್ಯನನ್ನು ಎರಡು ಭಾಗಮಾಡಿ ಜೋಡಿಸಿದ್ದು, ಮಧ್ಯಭಾಗದಲ್ಲಿ ಮೋಡಗಳು ಅದರ ಕೆಳಭಾಗದಲ್ಲಿ ಗಾಳಿಯು ರಭಸವಾಗಿ ಹೋಗುತ್ತಿದ್ದಾಗ ಅದರಲ್ಲಿ ಸಿಕ್ಕಿದ ವಸ್ತುಗಳು ಚೆಲ್ಲಾಪಿಲ್ಲಿಯಾಗಿರುವಂತೆ ರಚಿಸಿದ್ದು ಕೆಳಭಾಗದಲ್ಲಿ ನೀರಿನ ಅಲೆಗಳಂತೆ ರಚಿಸಿದ್ದಾರೆ. ಒಟ್ಟಾರೆಯಾಗಿ ನಿಸರ್ಗದಲ್ಲಿ ಗಣಪನನ್ನು ಕಾಣಬಹುದಾಗಿದೆ.

### ೧೭. ಗಣಪತಿ

ಈ ಮಣ್ಣಿನ ಭಿತ್ತಿಶಿಲ್ಪವನ್ನು ದಾನಯ್ಯ ಚೌಕಿಮಠ ಅವರು ೨೦೦೯ರಲ್ಲಿ ರಚನೆ ಮಾಡಿದ್ದು, ಈ ಶಿಲ್ಪವು ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದಲ್ಲಿ ೨X೨ ಅಳತೆಯಲ್ಲಿದೆ.[೨೦] ಸುಂದರವಾಗಿ ಗಣಪತಿಯನ್ನು ರಚಿಸಿದ್ದು ಇದು ಆಧುನಿಕ ಯುಗದಲ್ಲಿ ಗಣಪನ ಚಿತ್ರ ಮತ್ತು

---

೧೮. ಈ ಕಲಾಕೃತಿಯು ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ಸಂಗ್ರಹದಲ್ಲಿದೆ.

೧೯. ಈ ಕಲಾಕೃತಿಯು ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ಸಂಗ್ರಹದಲ್ಲಿದೆ.

೨೦. ಈ ಕಲಾಕೃತಿಯು ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ಸಂಗ್ರಹದಲ್ಲಿದೆ.

ಶಿಲ್ಪದಲ್ಲಿ ಆಗುತ್ತಿರುವಂತಹ ವಿಭಿನ್ನವಾದ ಶೈಲಿಯೆಂದು ಕರೆಯಬಹುದು. ಈ ಭಿತ್ತಿಶಿಲ್ಪದಲ್ಲಿ ಕಣ್ಣನ್ನು ಅತಿ ಸುಂದರವಾಗಿ ರಚಿಸಿದ್ದು, ಕುಳಿತಿರುವ ಭಂಗಿಯಲ್ಲಿರುವುದನ್ನು ಕಾಣುತ್ತೇವೆ. ಗಣಪತಿಯ ಬಲಗೈಯಿಂದ ಆಶೀರ್ವದಿಸುವಂತಿದ್ದು ಎಡಗೈಯಲ್ಲಿ ಉಂಡೆಯನ್ನು ಹಿಡಿದುಕೊಂಡಿರುವಂತೆ ತೋರುತ್ತದೆ. ಹಿಂಭಾಗದಲ್ಲಿ ಸೂರ್ಯ ವಿವಿಧ ರೀತಿಯ ಎಲೆಗಳು, ವಿನ್ಯಾಸದ ಬಳ್ಳಿಗಳು, ಅಲ್ಲಲ್ಲಿ ಗಾಜಿನ ಚೌಕ ಮತ್ತು ವೃತ್ತಾಕಾರವನ್ನು ಹೊಂದಿರುವಂತಹ ಗಾಜನ್ನು ನೋಡುತ್ತೇವೆ. ಒಟ್ಟಾರೆಯಾಗಿ ಈ ಭಿತ್ತಿಶಿಲ್ಪವನ್ನು ಗಮನಿಸಿದರೆ ಭೂಮಿಯು ದುಂಡಾಕಾರವಾಗಿದ್ದು ಗಣಪತಿಯು ಎಲ್ಲಾ ಕಡೆಗಳಿಗೂ ಸಂಚರಿಸುತ್ತಾನೆಯೇ ಎಂಬ ಭಾವನೆ ಮೂಡುವುದು.

## ೧೮. ಮಂಚದ ಮೇಲೆ ಕುಳಿತ ಗಣೇಶ

ಈ ಶಿಲ್ಪವನ್ನು ಜಯಪುರದಿಂದ ತಂದಿದ್ದು, ಗುಲ್ಬರ್ಗಾದ ಕಲಾವಿದ ಅಮೃತ ಶಾಹು ಅವರ ಸಂಗ್ರಹದಲ್ಲಿದ್ದು, ಒಂದುವರೆ ಒಂದುವರೆ ಅಡಿ ಅಳತೆಯಲ್ಲಿದೆ.[೨೧] ಕಲಾಕೃತಿಯನ್ನು ಮಣ್ಣಿನಲ್ಲಿ ರಚಿಸಿದ್ದು, ವಿಭಿನ್ನ ಶೈಲಿಯಲ್ಲಿ ರಚಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಗಣೇಶನು ಪೇಟಾವನ್ನು ಧರಿಸಿದ್ದು ಸುಂದರವಾದ ನಯನಗಳನ್ನು ಹೊಂದಿದ್ದು, ತನ್ನ ಸೊಂಡಿಲನ್ನು ಎಡ ಚಾಚಿಕೊಂಡಿರುವುದನ್ನು ಕಾಣುತ್ತೇವೆ. ಇಲ್ಲಿ ವಿಶೇಷವೆನೆಂದರೆ ಎರಡು ದಂತಗಳು ಇದ್ದು ಕೊರಳಿಗೆ ವಿವಿಧ ವಿನ್ಯಾಸದಿಂದ ಕೂಡಿದಂತ ಸರಗಳನ್ನು ಹಾಕಿಕೊಂಡಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಎಡಭಾಗದಲ್ಲಿ ಶಂಖ ಮತ್ತು ಅಭಯ ಹಸ್ತ ಕುಳಿತ ಭಂಗಿಯಲ್ಲಿದೆ. ಇಲಿಯು ಮುಂದಿನ ಎರಡು ಕಾಲುಗಳಲ್ಲಿ ಗಣಪತಿಯ ಕೈಯನ್ನು ಹಿಡಿದಿದ್ದು ಸೊಂಟಕ್ಕೆ ಡಾಬು ಮತ್ತು ಬಟ್ಟೆಯನ್ನು ಸುತ್ತಿಕೊಂಡಿದ್ದು ಕಾಲು ಮತ್ತು ಕೈಗಳಿಗೆ ಕಡಗಗಳನ್ನು ಹಾಕಿಕೊಂಡಿದ್ದು, ಮಂಚದ ಮೇಲೆ ವಿಶ್ರಾಂತಿಯನ್ನು ಪಡೆಯುತ್ತಿರುವುದನ್ನು ಕಾಣಬಹುದು. ಮಂಚವು ಸಹ ಸರಳವಾಗಿದ್ದು ಸುಂರವಾಗಿರುವುದನ್ನು ಈ ಶಿಲ್ಪದಲ್ಲಿ ಕಾಣಬಹುದಾಗಿದೆ.

## ೧೯. ಮಾರುತಿಯ ಅವತಾರದಲ್ಲಿ ಗಣೇಶ

ಈ ಶಿಲ್ಪವನ್ನು ೨೦೧೧ರಲ್ಲಿ ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಸುರೇಶ ಮಲ್ಲಪ್ಪ ಕುಂಬಾರ ಅವರು ರಚಿಸಿದ್ದು, ಮೂರುವರೆ ಅಡಿ ಅಳತೆಯಲ್ಲಿದೆ.[೨೨] ಗಣೇಶನು ಮಾರುತಿಯ ಅವತಾರದಲ್ಲಿ ನಿಂತಿದ್ದು, ವೀರ ಭಾವವನ್ನು ಕಾಣಬಹುದು. ಇಲ್ಲಿ ಗಣೇಶನಿಗೆ ನಾಲ್ಕು ಕೈಗಳಿದ್ದು, ಒಂದು ಕೈ ಅಭಯ ಹಸ್ತ, ಇನ್ನೊಂದು ಕೈಯಲ್ಲಿ ಗದೆ (ಎಡ) ಹನುಮಂತನು ಪರ್ವತವನ್ನು ಹಿಡಿದ ಭಂಗಿಯಲ್ಲಿದ್ದು ದಂತವನ್ನು ಹಿಡಿದಿದ್ದಾನೆ. ಕರಂಡ ಮಕುಟ ಮತ್ತು ನಾಗರ ಪಣೆಯನ್ನು ಹೊಂದಿದೆ. ಇಲ್ಲಿ ವಿಶೇಷವೇನೆಂದರೆ ಗಣೇಶನು ಮಾರುತೇಶ್ವರನ ಹಾಗೆ ವಸ್ತ್ರವನ್ನು ಧರಿಸಿದ್ದು ಮತ್ತು ಪಾದರಕ್ಷೆಗಳನ್ನು ಹಾಕಿದ್ದು ವಿಶೇಷವಾಗಿದೆ. ಈ ಕಲಾಕೃತಿಯಲ್ಲಿ ಹಳದಿ, ಗುಲಾಬಿ, ಕೆಂಪು, ಹಸಿರು, ಚಿನ್ನದ ಬಣ್ಣ ಮತ್ತು ಬಿಳಿ ಬಣ್ಣಗಳ ಮಿಶ್ರಣದಿಂದ ಕೂಡಿದೆ.

---

೨೧. ಗುಲ್ಬರ್ಗಾದ ಕಲಾವಿದ ಅಮೃತ ಶಾಹು ಅವರ ಸಂಗ್ರಹದಲ್ಲಿದೆ.

೨೨. ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಸುರೇಶ ಮಲ್ಲಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

### ೨೦. ಹೇರಂಬ ಗಣಪತಿ

ಈ ಶಿಲ್ಪವು ೨೦೧೨ರಲ್ಲಿ ರಚನೆಯಾಗಿದ್ದು, ಸುರೇಶ ಮಲ್ಲಪ್ಪ ಕುಂಬಾರ ಅವರು ರಚಿಸಿದ್ದು, ೪X೩ ಅಳತೆಯಲ್ಲಿದೆ.[೨೩] ಗಣೇಶನು ಮಣ್ಣಿನಲ್ಲಿ ರಚನೆಯಾಗಿದ್ದು ಮಲಗಿದ ಸಿಂಹದ ಮೇಲೆ ಕುಳಿತಿದ್ದಾನೆ. ಈ ಗಣೇಶನನ್ನು ಮುಗ್ದಲ ಪುರಾಣದ ಪ್ರಕಾರ ಹೇರಂಬನೆಂದು ಕರೆಯುತ್ತಾರೆ. ಇಲ್ಲಿ ಗಣೇಶನಿಗೆ ನಾಲ್ಕು ಕೈಗಳಿದ್ದು, ಮೇಲಿನ ಎರಡು ಕೈಗಳಲ್ಲಿ ಪಾಶಾಂಕುಶವನ್ನು ಹಿಡಿದಿದ್ದು, ಕೆಳಗಿನ ಬಲಗೈಯನ್ನು ಅಭಯಹಸ್ತವನ್ನು ಸೂಚಿಸಲಾಗಿದೆ. ಎಡಗೈಯಲ್ಲಿ ಮೋದಕವನ್ನು ಹಿಡಿದಿದ್ದು ಕರಂಡ ಮಕುಟವನ್ನು ಹೊಂದಿದ್ದಾನೆ. ಆಭರಣ ಮತ್ತು ವಸ್ತುಗಳು ಚನ್ನಾಗಿ ಮೂಡಿಬಂದಿವೆ. ಗಣೇಶನು ವೀರಭಾವವನ್ನು ಸೂಚಿಸುತ್ತದೆ.

### ೨೧. ದಾಸವಾಳದ ಮೇಲೆ ಕುಳಿತ ಗಣೇಶ

ಈ ಶಿಲ್ಪವು ೨೦೧೨ರಲ್ಲಿ ರಚನೆಯಾಗಿದ್ದು, ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಶಂಕರ ಅಣ್ಣಪ್ಪ ಕುಂಬಾರ ಅವರು ರಚಿಸಿದ್ದು, ೫X೨೧/೨ ಅಳತೆಯಲ್ಲಿದ್ದು ಮಣ್ಣಿನಲ್ಲಿ ರಚನೆಯಾಗಿದೆ.[೨೪] ದಾಸವಾಳ ಹೂ ಮೇಲೆ ಕುಳಿತ ಗಣೇಶನ ಶಿಲ್ಪವಾಗಿದೆ. ಈ ಶಿಲ್ಪದಲ್ಲಿ ಗಣೇಶನು ಅರ್ಧಪರ್ಯಂಕಾಸನದಲ್ಲಿ ಕುಳಿತಿದ್ದು ವಿಶೇಷವಾಗಿದೆ. ಇಲ್ಲಿ ಕಲಾವಿದನ ಸೃಜನಶೀಲತೆ ಹೆಚ್ಚು ಬೆಳಕಿಗೆ ಬಂದಿದೆ. ಗಣೇಶನನ್ನು ತಾವರೆಯ ಹೂ ಮೇಲೆ ಕೂಡಿಸುವುದು ಸಹಜ, ಆದರೆ ಇಲ್ಲಿ ದಾಸವಾಳದ ಹೂ ಮೇಲೆ ಕೂಡಿಸಿರುವುದು ವಿಶೇಷವಾಗಿದೆ. ಕಲಾವಿದನು ಗಣೇಶನನ್ನು ಲೆಕ್ಕವಿಲ್ಲದಷ್ಟು ಆಕಾರಗಳನ್ನು ಮತ್ತು ರೂಪಗಳನ್ನು ಕೊಟ್ಟು ರಚಿಸಿದ್ದಾನೆ ಎಂಬುದಕ್ಕೆ ಈ ಶಿಲ್ಪವು ಒಂದು ಉದಾಹರಣೆಯಾಗಿದೆ. ಈ ಶಿಲ್ಪವು ಸುಂದರವಾಗಿ ಮೂಡಿಬಂದಿದ್ದು ಚೈತನ್ಯವನ್ನು ಸೃಷ್ಠಿಸುತ್ತದೆ.

### ೨೨. ಅಸುರ ಸಂಹಾರ

ಈ ಶಿಲ್ಪವು ೨೦೧೨ರಲ್ಲಿ ರಚನೆಯಾಗಿದ್ದು, ಸುರೇಶ ಮಲ್ಲಪ್ಪ ಕುಂಬಾರ ಅವರು ರಚಿಸಿದ್ದು, ೫X೨೧/೨ ಅಳತೆಯಲ್ಲಿದೆ.[೨೫] ಇಲ್ಲಿ ಗಣೇಶನು ಅಸುರನನ್ನು ಕೆಳಗಡೆ ಹಾಕಿ ಮೇಲೆ ಕುಳಿತಿರುವ ಶಿಲ್ಪವಾಗಿದೆ. ಈ ಶಿಲ್ಪವು ಮಣ್ಣಿನಲ್ಲಿ ರಚನೆಯಾಗಿದ್ದು, ಕೈಗಳಲ್ಲಿ ಆಯುಧಗಳನ್ನು ಹಿಡಿದು ಕುಳಿತಿದ್ದಾನೆ. ಮತ್ತು ಅಭಯಹಸ್ತವಿದೆ. ಕರಂಡ ಮಕುಟವನ್ನು ಹೊಂದಿದ್ದು ಕೊರಳಲ್ಲಿ ಆಭರಣ ಗಣೇಶನ ಹಿಂದೆ ತುತ್ತೂರಿ ಇದೆ. ಒಟ್ಟಾರೆಯಾಗಿ ಗಮನಿಸಿದಾಗ ಗಣೇಶನು ಎಲ್ಲಿ ವಿಘ್ನಗಳನ್ನು ತುಳಿದು ನಾಶಪಡಿಸುತ್ತಾನೆ ಎನ್ನುವ ಸೂಚನೆಯನ್ನು ಮತ್ತು ಸಂಗೀತದಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಹೊಂದಿದವನು ಎಂದು ಸೂಚಿಸುತ್ತದೆ. ಪಕ್ಕದಲ್ಲಿ ಮೂಷಿಕವನ್ನು ರಚಿಸಿದ್ದಾರೆ. ಈ ಕಲಾಕೃತಿಯು ಸೃಜನಶೀಲತೆಯಿಂದ ಕೂಡಿದೆ.

---

೨೩. ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಸುರೇಶ ಮಲ್ಲಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

೨೪. ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಶಂಕರ ಅಣ್ಣಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

೨೫. ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಸುರೇಶ ಮಲ್ಲಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

### ೨೩. ಮೊಸಳೆಯ ಮೇಲೆ ಕುಳಿತ ಗಣೇಶ

ಈ ಶಿಲ್ಪವು ೨೦೧೨ರಲ್ಲಿ ರಚನೆಯಾಗಿದ್ದು, ಸುರೇಶ ಮಲ್ಲಪ್ಪ ಕುಂಬಾರ ಅವರು ರಚಿಸಿದ್ದು, ೨ ೧/೨X೧ ೧/೨ ಅಡಿ ಅಳತೆಯಲ್ಲಿದೆ.[೨೬] ಈ ಶಿಲ್ಪದಲ್ಲಿ ಗಣೇಶನು ಮೊಸಳೆಯನ್ನು ವಾಹನವನ್ನಾಗಿ ಮಾಡಿಕೊಂಡಿದ್ದು ವಿಶೇಷವಾಗಿದೆ. ಇಲ್ಲಿ ಕಲಾವಿದನು ಗಣೇಶನನ್ನು ಹಲವಾರು ದೃಷ್ಠಿಕೋನಗಳಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಗಣೇಶನಿಗೆ ನಾಲ್ಕು ಕೈಗಳಿದ್ದು ಪಾಶಾಂಕುಶ ಅಭಯಹಸ್ತ ಕರಂಡ ಮುಕುಟವನ್ನು ಹೊಂದಿದ್ದಾನೆ. ಈ ಗಣೇಶ ಶಿಲ್ಪವು ಮಣ್ಣಿನಲ್ಲಿ ರಚನೆಯಾಗಿದ್ದು ಗುಲಾಬಿ, ಬಿಳಿ, ಕೇಸರಿ ಬಣ್ಣವನ್ನು ಹೊಂದಿದೆ. ಈ ಶಿಲ್ಪಕಲಾಕೃತಿಯು ಉದ್ಯೋಗದ ಹಿನ್ನೆಲೆಯಲ್ಲಿ ರಚನೆಯಾಗಿದೆ.

### ೨೪. ಭಿತ್ತಿ ಶಿಲ್ಪದಲ್ಲಿ ಗಣೇಶ

ಈ ಶಿಲ್ಪವನ್ನು ಜಯಪೂರದಿಂದ ತಂದಿದ್ದು, ಗುಲ್ಬರ್ಗಾದ ಕಲಾವಿದ ಅಮೃತ ಶಾಹು ಅವರ ಸಂಗ್ರಹದಲ್ಲಿದ್ದು, ೧X೧ ೧/೨ ಅಡಿ ಅಳತೆಯಲ್ಲಿದೆ.[೨೭] ಗಣೇಶನು ಭಿತ್ತಿ ಶಿಲ್ಪದಲ್ಲಿ ರಚನೆಯಾಗಿದ್ದು ಸುಖಾಸನದಲ್ಲಿ ಕುಳಿತಿದ್ದಾನೆ. ನಾಲ್ಕು ಕೈಗಳಿದ್ದು, ಒಂದು ಕೈಯಲ್ಲಿ ಹೂ ಇನ್ನೊಂದು ಕೈಯಲ್ಲಿ ಪರಶು ಶಂಖ, ಲಿಂಗವನ್ನು ಹಿಡಿದಿದ್ದು ಕರಂಡ ಮಕುಟವನ್ನು ಹೊಂದಿದೆ. ಕೊರಳಲ್ಲಿ ಗೆಜ್ಜೆ ಆಕಾರದ ಹಾರವನ್ನು ಹಾಕಿಕೊಂಡಿದ್ದು ಮುಖದಲ್ಲಿ ವೀರ ಭಾವನೆ ಎದ್ದು ಕಾಣುತ್ತದೆ. ಹಿಂದೆ ಸುಂದರವಾದ ಪ್ರಭಾವಳಿ ಇದ್ದು ಕಲಾವಿದನ ಸೃಜನಶೀಲತೆಗೆ ಮೀರಿ ರಚನೆಯಾಗಿರುವುದು ಕಂಡುಬರುತ್ತದೆ. ಗಣೇಶನು ಏಕದಂತನಾಗಿದ್ದು ಮಣ್ಣಿ ಮಾಧ್ಯಮದಲ್ಲಿ ರಚನೆಯಾಗಿದೆ.

---

೨೬. ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಸುರೇಶ ಮಲ್ಲಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

೨೭. ಈ ಕಲಾಕೃತಿಯು ಗುಲ್ಬರ್ಗಾದ ಕಲಾವಿದ ಅಮೃತ ಶಾಹು ಅವರ ಸಂಗ್ರಹದಲ್ಲಿದೆ.



೦೧. ಡೋಲು ಬಾರಿಸುತ್ತಿರುವ ಗಣೇಶ



೦೨. ಹೂದಾನಿಯ ಮೇಲೆ ಅಲಂಕಾರಿಕ ಗಣೇಶ



೦೩. ಪೇಟಿ ಬಾರಿಸುತ್ತಿರುವ ಗಣೇಶ



೦೪. ಕುಳಿತ ಗಣೇಶ



೦೫. ಇಲಿಯ ಮೇಲೆ ಕುಳಿತ ಗಣೇಶ



೦೬. ಪಣತಿಯ ಅಲಂಕಾರಿಕ ಗಣೇಶ



೦೭. ಕುಳಿತ ಗಣೇಶ



೦೮. ಲಿಂಗಕ್ಕೆ ಅಪ್ಪಿಕೊಂಡಿರುವ ಗಣೇಶ



೧೩. ಜೋತಿ ಬೆಳಗಿಸುವ ಪಣತಿಗೆ
ಒರಗಿರುವ ಗಣೇಶ



೧೪. ಸೌಂದರ್ಯದಲ್ಲಿ ಗಣಪತಿ



೧೫. ಹೇರಂಬ ಗಣಪತಿ



೧೬. ನಿಸರ್ಗದಲ್ಲಿ ಗಣಪತಿ



೧೭. ಗಣಪತಿ



೧೮. ಮಂಚದ ಮೇಲೆ ಕುಳಿತ ಗಣೇಶ



೧೯. ಮಾರುತಿಯ ಅವತಾರದಲ್ಲಿ ಗಣೇಶ

## ಅಧ್ಯಾಯ – ನಾಲ್ಕು

## ಶಿಲಾ ಮಾಧ್ಯಮದಲ್ಲಿ ಗಣೇಶನ ಶಿಲ್ಪಗಳು

ಕರ್ನಾಟಕದ ಪಾರಂಪರಿಕ ಶಿಲ್ಪಕಲೆ ಭಾರತೀಯ ಶಿಲ್ಪಕಲೆಯ ಜೊತೆ ಜೊತೆಗೆ ಬೆಳೆದು, ಉಳಿದು ಬಂದಿರುವಂತೆ ತನ್ನದೆಯಾದ ಕೊಡುಗೆಯನ್ನು ಭಾರತೀಯ ಶಿಲ್ಪಕಲಾ ಪ್ರಪಂಚಕ್ಕೆ ನೀಡಿದೆ.[೧] ಶಿಲ್ಪಕಲೆ ಎಂದೂ, ಎಲ್ಲಿ ಮತ್ತು ಯಾರಿಂದ ಪ್ರಾರಂಭವಾಯಿತು ಎಂದರೆ, ಎಂದು ಮನುಷ್ಯ ಘನಾಕೃತಿಯಿರುವ ಕಲ್ಲು, ಮಣ್ಣು, ಮರದಂತಹ ವಸ್ತುವನ್ನು ಕೈಯಲ್ಲಿ ಹಿಡಿದು ಅದರಲ್ಲಿ ತನ್ನದೇಯಾದ ರೂಪಾಕೃತಿ ಕಾಣುತ್ತಾ, ಮುಟ್ಟಿ ಸವರುತ್ತಾ, ತೀಡುತ್ತಾ ತನ್ನದೇಯಾದ ರೂಪಕೊಟ್ಟು, ಸಂತೋಷ ಪಡುವುದಕ್ಕೆ ಪ್ರಾರಂಭಿಸಿದನೋ ಅಂದಿನಿಂದಲೇ ಶಿಲ್ಪಕಲೆ ಪ್ರಾರಂಭವಾಯಿತು ಎನ್ನಬಹುದು.

ಶಿಲ್ಪಕಲೆಯ ಹುಟ್ಟು ಪ್ರಾಗ್ಯೈತಿಹಾಸಿಕ ಕಾಲದಿಂದ ಗುರುತಿಸುತ್ತೇವೆ. ಚಿತ್ರ ಮತ್ತು ಶಿಲ್ಪಗಳೆರಡು ಒಟ್ಟಿಗೆ ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಶಿಲ್ಪಕಲೆಯ ಬೆಳವಣಿಗೆಯ ಹಂತಗಳನ್ನು ಅಧ್ಯಯನದ ದೃಷ್ಠಿಯಿಂದ ಇತಿಹಾಸ ಪೂರ್ವದ ಕಲೆ, ಇತಿಹಾಸ ಕಾಲದ ಕಲೆ ಮತ್ತು ಆಧುನಿಕ ಕಾಲದ ಶಿಲ್ಪಕಲೆ ಎಂದು ಗುರುತಿಸುತ್ತೇವೆ. ಮಾನವ ಶಿಲ್ಪಗಳನ್ನು ರಚಿಸಿ ಆನಂದ ಪಡುವುದಕ್ಕೆ ಪ್ರಾರಂಭಿಸಿದ ಮೊದಲ ಉದಾಹರಣೆಗಳು ಕ್ರಿ.ಪೂ. ಸುಮಾರು ೩೫೦೦೦ ವರ್ಷಗಳ ಹಿಂದಿನ ಹಳೆ ಶಿಲಾಯುಗದ ಕಾಲದಿಂದಲೇ ಕಾಣುತ್ತೇವೆ.[೨] ಮುಂದೆ ಮನುಷ್ಯನ ನಾಗರಿಕತೆ ಬೆಳೆದಂತೆ ಉದ್ದೇಶ ಪೂರ್ವಕವಾಗಿ ಶಿಲ್ಪಗಳನ್ನು ರಚಿಸುವುದಕ್ಕೆ ಪ್ರಾರಂಭಿಸಿದ. ಭಾರತೀಯ ಶಿಲ್ಪಕಲಾ ಇತಿಹಾಸ; ಶಿಲ್ಪ ಸ್ಪಷ್ಟವಾಗಿ ರೂಪಗೊಂಡು ಸಂಪೂರ್ಣತೆಯ ಹಂತ ತಲುಪಿದ ಮೆಟ್ಟಿಲಿನಿಂದಲೆ ಪ್ರಾರಂಭವಾಗುತ್ತದೆ. ನಮ್ಮ

---

೧. ಡಾ. ಶಿವಾನಂದ ಎಚ್. ಬಂಟನೂರ, ಸಮಕಾಲೀನ ಶಿಲ್ಪಕಲೆ, ಕನ್ನಡ ವಿ.ವಿ. ಹಂಪಿ, ಪು–೧

೨. ವಿಜಯಾರಾವ್, ಶಿಲ್ಪಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಪು–೫

ಸಂಸ್ಕೃತಿಯಲ್ಲಿ ಅನೇಕ ಮತ-ಧರ್ಮಗಳಿವೆ. ಎಲ್ಲ ಮತ-ಧರ್ಮದವರು ಕಲೆಯನ್ನು ಪ್ರೋತ್ಸಾಹಿಸಿದ್ದಾರೆ. ಮತ್ತು ಶಿಲ್ಪಗಳನ್ನು ಕೆತ್ತಿದ್ದಾರೆ. ಆದರೆ ಈ ಎಲ್ಲ ಜನಾಂಗಗಳಲ್ಲಿರುವ ಕಲೆಗಳನ್ನು ತಿಳಿದುಕೊಳ್ಳಲು ಬಾಹ್ಯ ಮಾತ್ರ ಸಾಲದು. ಯಾವುದೇ ಧರ್ಮದ ಕಲೆಯು ಅರ್ಥವಾಗಬೇಕಾದರೆ ಆ ಧರ್ಮದ ಸಿದ್ಧಾಂತ, ಪುರಾಣ-ಪುಣ್ಯಕಥೆಗಳ ಜ್ಞಾನ ಅವಶ್ಯವೆನಿಸುತ್ತದೆ. ಎಲ್ಲ ಮತ-ಧರ್ಮಗಳಲ್ಲಿ ರಚನೆಯಾಗಿರುವ ಚಿತ್ರ, ಶಿಲ್ಪಕಲೆಗಳು ಆಯಾ ಧರ್ಮದ ಸಿದ್ಧಾಂತ, ಪುರಾಣ-ಪುಣ್ಯಕಥೆಗಳ ಆಧಾರದ ಮೇಲೆ ರಚನೆಯಾಗಿವೆ. ಇಂತಹ ಹಲವಾರು ಧರ್ಮಗಳ ಹಿನ್ನೆಲೆಯ ಶಿಲ್ಪಗಳಲ್ಲಿ ದೇವಾನುದೇವತೆಗಳು, ಕಿನ್ನರರು, ಕಿಂಪುರುಷರು, ಲಕ್ಷ್ಮೀ, ಪಾರ್ವತಿ, ಶಿವ, ವಿಷ್ಣು, ಬ್ರಹ್ಮ ಹೀಗೆ ಹಲವಾರು ದೇವಾನುದೇವತೆಗಳ ಶಿಲ್ಪಗಳನ್ನು ಕಾಣುತ್ತೇವೆ. ಆದರೆ ಇನ್ನು ಕೆಲವು ವಿಶೇಷ ದೇವರುಗಳೆಂದರೆ ಆಂಜನೇಯ, ಸರಸ್ವತಿ, ಗಣಪತಿ ಇವುಗಳಲ್ಲಿ ಗಣಪತಿ ಶಿಲ್ಪವಂತೂ ಯಾವ ಶೈಲಿಯ ದೇವಾಲಯದಲ್ಲಾದರೂ ಕಂಡುಬರುತ್ತದೆ. ಈ ಗಣೇಶನ ಶಿಲ್ಪಕ್ಕೆ ಸಂಬಂಧಿಸಿದ ಶಿವ ಪುರಾಣದ ಪ್ರಕಾರ ಗಣೇಶನು ಮೊದಲು ಮಣ್ಣಿನಲ್ಲಿ ಹುಟ್ಟಿದ ವಿವರಣೆಯನ್ನು ನೀಡುತ್ತದೆ. ಅದೇ ಪ್ರಕಾರವಾಗಿ ಮುಂದೆ ಕಲ್ಲಿನಲ್ಲಿ ರಚಿಸಿರಬಹುದು. ಈ ದೀರ್ಘವಾದ ಪರಂಪರೆ ಆಯಾ ಕಾಲದಲ್ಲಿ ಲಭ್ಯವಿದ್ದ ವಿವಿಧ ಮಾಧ್ಯಮ ಹಾಗೂ ಪರಿಕರಗಳಲ್ಲಿ ವಿನ್ಯಾಸಗೊಳ್ಳುತ್ತಾ ಬಂದಿರುವುದನ್ನು ಐತಿಹಾಸಿಕವಾಗಿ ಗುರುತಿಸಬಹುದಾಗಿದೆ. ಮಥುರಾದ ನಂಕಿಸ್ ದಿಬ್ಬದಲ್ಲಿ ಅರ್ಧ ಮೀಟರ್ ಎತ್ತರದ ನಿಂತ ಭಂಗಿಯ ನಗ್ನ ದ್ವಿಭುಜ ಗಣಪತಿಯ ಉಬ್ಬು ಶಿಲ್ಪವೇ ಪ್ರಾಯಶಃ ಪ್ರಾಚೀನವಾದ ಶಿಲಾ ಶಿಲ್ಪವೆಂದು ತಜ್ಞರು ಅಭಿಪ್ರಾಯಪಡುತ್ತಾರೆ.

ಡಾ. ಅ. ಸುಂದರ ಅವರು ಮಧ್ಯಪ್ರದೇಶದ ಭೂಮಾರ ಎಂಬ ಸ್ಥಳದಲ್ಲಿ ಗುಪ್ತರ ಕಾಲದ ೫ನೇ ಶತಮಾನದ ಶಿವ ದೇವಾಲಯದಲ್ಲಿ ಕುಳಿತ ಭಂಗಿಯಲ್ಲಿರುವ ಶಿಲಾ ಗಣಪತಿ ಪೂರ್ಣ ಪ್ರಮಾಣದಲ್ಲಿ ರಚನೆಯಾಗಿರುವ ಗಣೇಶನ ವಿಗ್ರಹ ಕರ್ನಾಟಕದ ಅತ್ಯಂತ ಪ್ರಾಚೀನ ಗಣೇಶನ ಶಿಲ್ಪವಿರುವುದು ಇಡಗುಂಜಿ (ಕ್ರಿ.ಶ.೨ನೇ ಶತಮಾನ), ಚಾಲುಕ್ಯರ ವಾತಾಪಿ ಗಣಪತಿ (ಕ್ರಿ.ಶ.೫ನೇ ಶತಮಾನ), ಐಹೊಳೆಯ ಗಣಪತಿ ಶಿಲ್ಪ (ಕ್ರಿ.ಶ.೪೫೦ ರಿಂದ ೭೫೦ರ ಕಾಲಾವಧಿ)ಯಲ್ಲಿ ರಚನೆಯಾಗಿದೆ. ಇಲ್ಲಿ ಪಲ್ಲವರ ನರಸಿಂಹವರ್ಮನು ಬಾದಾಮಿಯನ್ನು ಧ್ವಂಧ್ವಗೊಳಿಸಿ ಅಲ್ಲಿಯ ವಾತಾಪಿ ಗಣೇಶನನ್ನು ಕಾಂಚಿಪುರಕ್ಕೆ ತೆಗೆದುಕೊಂಡು ಹೋಗಿ ದಾರಸುರಂನಲ್ಲಿ ಪ್ರತಿಷ್ಠಾಪಿಸಿದ ನಂತರ ತಮಿಳನಾಡಿನಲ್ಲಿ ಚಾಲುಕ್ಯ ಶೈಲಿಯ ಶಿಲಾ ಶಿಲ್ಪ ಪರಂಪರೆ ಪ್ರಾರಂಭವಾಯಿತು. ಮುಂದೆ ಬೇಲೂರು, ಹಳೇಬೀಡು, ಸೋಮನಾಥಪುರ (ಕ್ರಿ.ಶ.೧೦೦೦-೧೩೦೦)ರ ವರೆಗೆ ಮುಂದೆ ವಿಜಯನಗರ ಕಾಲದಲ್ಲಿ (೧೪೦೦-೧೬೦೦) ಬೃಹತ್ ಗಾತ್ರದಲ್ಲಿ ಗಣೇಶನ ಶಿಲಾ ವಿಗ್ರಹಗಳು[೩] ರೂಪಗೊಂಡವು. ನಂತರ ೧೮ನೇ ಶತಮಾನದಲ್ಲಿ ಕಲಾಕ್ಷೇತ್ರದಲ್ಲಿ ಒಂದು ಹೊಸ ಅಲೆಯ ಗಾಳಿ ಬೀಸಿತು. ಪಾಶ್ಚಾತ್ಯರ ಆಗಮನದಿಂದ ನಮ್ಮ ಸಾಂಪ್ರದಾಯಕವಾಗಿ ರೂಢಿಸಿಕೊಂಡು ಬಂದ ಕಲೆಗಳು ನಾಶವಾಗತೊಡಗಿದವು. ತದನಂತರದಲ್ಲಿ ಆಧುನಿಕ ಭಿತ್ತಿ ಶಿಲ್ಪಗಳು ರಚನೆಯಾಗತೊಡಗಿದವು.

---

೩. ವಿಜಯ NEXT, ವಾರಪತ್ರಿಕೆ, ಸೆಪ್ಟಂಬರ್ ೦೨.೦೮.೨೦೧೧ ಗಜಮುಖ, ಡಾ.ಎಸ್.ಸಿ.ಪಾಟೀಲ ಅವರ ಲೇಖನ ಪು-೩

ಹೀಗೆ ಹಲವಾರು ರೀತಿಯಲ್ಲಿ ಭಿತ್ತಿ ಶಿಲ್ಪಗಳು ಮತ್ತು ಸೃಜನಶೀಲ ಶಿಲ್ಪಗಳು ರಚನೆಯಾದವು. ಅದರಲ್ಲಿಯೂ ಹಲವಾರು ರೀತಿಯಲ್ಲಿ ಗಣೇಶ ಶಿಲ್ಪಗಳು ರಚನೆಯಾಗಿರುವುದು ಕಂಡುಬರುತ್ತದೆ. ಗಣೇಶನು ಚಿತ್ರಕಲೆಯಲ್ಲದೆ ಶಿಲ್ಪದಲ್ಲಿಯೂ ರಚನೆಯಾಗುತ್ತಿರುವುದು ಸತ್ಯ ಸಂಗತಿಯಾಗಿದೆ.

**೧. ಕುಳಿತ ಗಣೇಶ**

ಈ ಶಿಲ್ಪವು ಬಾದಾಮಿಯ ಚಾಲುಕ್ಯರ ಕಾಲದಲ್ಲಿ ರಚನೆಯಾಗಿದ್ದು, ಬಾದಾಮಿಯ ಬತ್ತೆರ ಹನುಮಂತನ ಗುಡಿಯಲ್ಲಿದೆ. ಈ ಶಿಲ್ಪವು ೩೧/೨X೨ ಅಡಿ ಅಳತೆಯಲ್ಲಿದೆ.[೪] ಈ ಶಿಲ್ಪವು ಅರ್ಧಾಸನದಲ್ಲಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಮೇಲಿನ ಬಲಗೈಯಲ್ಲಿ (ಅಂಕುಶ), ಎಡಗೈಯಲ್ಲಿ (ಪಾಶ), ಕೆಳಗಿನ ಬಲಗೈಯಲ್ಲಿ (ಬೀಜಪೂರ), ಎಡಗೈಯಲ್ಲಿ (ಮೋದಕ ಪಾತ್ರೆ) ಚೌಕಾಕಾರ ಪೀಠವನ್ನು ಹೊಂದಿದೆ. ಕರಂಡ ಮುಕುಟವನ್ನು ಹೊಂದಿದೆ. ಇವನು ಹಿಡಿದಿರುವ ಆಯುಧ, ಅಂಕುಶ, ಪಾಶ ಮತ್ತು ಮೋದಕ ಪಾತ್ರೆಯನ್ನು ಗಮನಿಸಿದಾಗ (ಬೀಜಪೂರ) ಪಾರಮಾರ್ಥ ಚಿಂತನೆಗೆ ಕಲಾವಿದರನ್ನು ಕೊಂಡೊಯ್ಯುತ್ತದೆ. ಪುರಾಣಗಳ ಹಿನ್ನೆಲೆಯಲ್ಲಿ ನೋಡಿದಾಗ ವಿಘ್ನನಿವಾರಕನಾದ ಗಣೇಶನು ವಿಘ್ನಗಳನ್ನು ಹತೋಟಿಯಲ್ಲಿಟ್ಟು ಬಂಧಿಸುವ ಸೌಭಾಗ್ಯದ ಸಂಕೇತವಾಗಿ ಬಳಸಿಕೊಳ್ಳಲಾಗಿದೆ. ಕಲಾವಿದನಾಗಿ ನೋಡಿದಾಗ ಸೃಜನಶೀಲತೆಯ ಕಡೆಗೆ ಗಮನ ಸೆಳೆದಿದ್ದಾನೆ.

**೨. ನಿಂತ ಭಂಗಿ ಗಣೇಶ**

ಈ ಶಿಲ್ಪವು ವಿಜಯನಗರ ಕಾಲದಲ್ಲಿ ೧೪-೧೫ನೇ ಶತಮಾನದಲ್ಲಿ ರಚನೆಯಾಗಿದ್ದು, ಹಂಪಿಯ ವಿರೂಪಾಕ್ಷಿ ದೇವಾಲಯದ ಮುಖ ಮಂಟಪದ ಕಂಬದ ಮೇಲೆ ರಚನೆಯಾಗಿದೆ. ೧X೧ ಅಡಿ ಅಳತೆಯಲ್ಲಿದೆ.[೫] ನಿಂತ ಭಂಗಿಯಲ್ಲಿದೆ. ಗ್ರ್ಯಾನೈಟ್ ಶಿಲೆಯಿಂದ ಕೆತ್ತಲಾಗಿದೆ. ಹತ್ತು ಕೈಗಳನ್ನು ಹೊಂದಿದ್ದು ಅವುಗಳಲ್ಲಿ ವಿವಿಧ ರೀತಿಯ ಆಯುಧಗಳನ್ನು ಹೊಂದಿದೆ. ಮೇಲಿನ ಕೈಗಳಲ್ಲಿ ಶಂಖ ಚಕ್ರವನ್ನು ಹೊಂದಿರುವುದು ಶಿಲ್ಪವು ವಿಶಿಷ್ಟತೆಯಾಗಿದೆ. ಕರಂಡ ಮುಕುಟವನ್ನು ಹೊಂದಿದೆ. ಬಲ ಮುಂದಿನ ಕೈಯಲ್ಲಿ ದಂತ, ಎಡಗೈಯಲ್ಲಿ ಲಿಂಗವಿದೆ. ಇನ್ನಿತರ ಕೈಗಳಲ್ಲಿ ವಿವಿಧ ಆಯುಧಗಳನ್ನು ರಚಿಸಿದ್ದು ಶಿಲ್ಪವು ಕುಬ್ಜಕಾರದಲ್ಲಿದೆ. ಸೌಂದರ್ಯದ ಹಿನ್ನೆಲೆಯಲ್ಲಿ ಕಂಬದ ಮೇಲೆ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ಚೌಕಾಕಾರದ ಪೀಠದ ಮೇಲಿದೆ. ಉದರಕ್ಕೆ ನಾಗಬಂಧವನ್ನು ಹೊಂದಿದ್ದು, ಏಕದಂತನಾಗಿದ್ದಾನೆ.

**೩. ಕುಳಿತ ಗಣೇಶ**

ಈ ಶಿಲ್ಪವು ಹಂಪಿಯ ಕಡಲೆಕಾಳು ಗಣೇಶ ದೇವಸ್ಥಾನದ ಮುಖ ಮಂಟಪದ ಕಂಬದ ಮೇಲೆ ರಚನೆಯಾಗಿದೆ. ಇದು ಸಹ ವಿಜಯನಗರ ಕಾಲದಲ್ಲಿ ರಚನೆಯಾಗಿದ್ದು, ೧೧/೨X೧ ಅಡಿ

---

೪. ಈ ಕಲಾಕೃತಿಯು ಬಾದಾಮಿಯ ಬತ್ತೇರ ಹನುಮಂತನ ಗುಡಿಯಲ್ಲಿದೆ.

೫. ಈ ಕಲಾಕೃತಿಯು ಹಂಪಿಯ ವಿರೂಪಾಕ್ಷಿ ದೇವಾಲಯದ ಮುಖ ಮಂಟಪದ ಕಂಬದ ಮೇಲೆ ಇದೆ.

ಅಳತೆಯಲ್ಲಿದೆ.[೬] ಕುಳಿತ ಭಂಗಿಯಲ್ಲಿ ಅರ್ಧಾಸನದಲ್ಲಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಮೇಲಿನ ಎರಡು ಕೈಗಳಲ್ಲಿ ಅಂಕುಶ (ಬಲ), ಪಾಶ (ಎಡ) ಭದ್ರ ಪೀಠದಲ್ಲಿದೆ. ಕರಂಡ ಮುಕುಟವನ್ನು ಹೊಂದಿದೆ. ನಾಗಬಂಧವಿದ್ದು ಯಜ್ಞೋಪವಿತವನ್ನು ಹೊಂದಿದೆ. ಇದು ಸಹ ಕಂಬದ ಮೇಲಿನ ಉಬ್ಬು ಶಿಲ್ಪವಾಗಿದ್ದು, ಸೂಕ್ಷ್ಮವಾಗಿ ಕೊರಳಹಾರಗಳನ್ನು ರಚಿಸಲಾಗಿದೆ. ಶಿಲ್ಪವು ಇನ್ನಿತರ ಶಿಲ್ಪಗಳಿಗಿಂತ ಭಿನ್ನವಾಗಿದ್ದು ಸೊಂಡಿಲನ್ನು ಎಡಗೈಯಲ್ಲಿರುವ ಮೋದಕ ಪಾತ್ರೆಗೆ ಮುಟ್ಟಿರುವುದು ಸ್ಪಷ್ಟವಾಗಿದೆ. ಈ ಶಿಲ್ಪದಲ್ಲಿ ದೇವರು ಜೀವಿಗಳಿಗೆ ಭೋಗಗಳನ್ನು ಕಲ್ಪಿಸಿ ಮಾಯಾ ಬಂಧನದಲ್ಲಿ ಕಟ್ಟಿಹಾಕಿರುವುದರ ಜೊತೆಗೆ ನಿಯಂತ್ರಣಕ್ಕೆ ಸಿಗದ ಅಹಂಕಾರವನ್ನು ನಿಯಂತ್ರಿಸುವುದರಿಂದ ಆತ್ಮನು ದೇವನ ವಶವಾಗುತ್ತಾನೆ ಎನ್ನುವ ಸೂಚನೆಯನ್ನು ನೀಡುತ್ತದೆ. ಈ ಶಿಲ್ಪದಲ್ಲಿರುವ ಮುಖದಲ್ಲಿ ನಿರಿಗೆಗಳಿದ್ದು ಸ್ಪಷ್ಟವಾದ ನಿಜ ಆನೆಯ ಮುಖವನ್ನು ಹೋಲುತ್ತದೆ.

**೪. ಬಾದಾಮಿ ಗಣಪತಿ**

ಬಾದಾಮಿಯ ಚಾಲುಕ್ಯರ ಕಾಲದಲ್ಲಿ ೬ನೇ ಶತಮಾನದಲ್ಲಿ ರಚನೆಯಾಗಿದ್ದು, ಬಾದಾಮಿಯಲ್ಲಿದೆ.[೭] ಈ ಗಣೇಶ ಶಿಲ್ಪವು ಕುಳಿತ ಭಂಗಿಯಲ್ಲಿ ಅರ್ಧಾಸನದಲ್ಲಿದೆ. ಎರಡು ಕೈಗಳಿದ್ದು, ಕರಂಡ ಮುಕುಟವನ್ನು ಹೊಂದಿದೆ. ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆಯನ್ನು ಹೊಂದಿದೆ. ಆರನೇ ಶತಮಾನದಲ್ಲಿ ರಚನೆಯಾಗಿದ್ದು ಹೆಚ್ಚು ಆಭರಣಗಳು ರಚನೆಯಾಗಿಲ್ಲ. ಈ ಶಿಲ್ಪದಲ್ಲಿಯೂ ಗಣೇಶನ ಸೊಂಡಿಲು ಮೋದಕ ಪಾತ್ರೆಯನ್ನು ಮುಟ್ಟಿರುವಂತಹ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ.

**೫. ನೃತ್ಯ ಗಣೇಶ ಶಿಲ್ಪ**

ವಿಜಯನಗರ ಕಾಲದಲ್ಲಿ ರಚನೆಯಾಗಿದ್ದು, ಹಂಪಿಯ ವಿರೂಪಾಕ್ಷಿ ದೇವಾಲಯದ ಪ್ರಕಾರದ ಗೋಡೆಯ ಕಂಬದ ಮೇಲೆ ರಚನೆಯಾಗಿದೆ.[೮] ೧೧/೨X೧ ಅಡಿ ಅಳತೆಯಲ್ಲಿದ್ದು, ಈ ಶಿಲ್ಪವು ನೃತ್ಯ ಭಂಗಿಯಲ್ಲಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ ಇಳಿಬಿಟ್ಟ ಹಾಗೆ ಹಿಡಿದಿದೆ. ವಕ್ಷಬಂಧ ಮತ್ತು ನಾಗಬಂಧವನ್ನು ಜೊತೆಗೆ ಭದ್ರ ಪೀಠವನ್ನು ಒಳಗೊಂಡಿದೆ. ಇಲ್ಲಿ ನೋಡುಗರಿಗೆ ಒಂದು ನೃತ್ಯದ ಹಿನ್ನೆಲೆಯಲ್ಲಿ ರಚಿಸಿದ ಈ ಶಿಲ್ಪವು ನಾಟ್ಯಶಾಸ್ತ್ರದ ಸೂತ್ರದಂತೆ ರಚನೆಯಾಗಿದೆ. ಕಲಾವಿದರು ಯಾವುದೇ ಶಿಲ್ಪವನ್ನು ರಚಿಸುವಾಗ ಹಲವಾರು ಕಟ್ಟುಪಾಡುಗಳನ್ನು ಅನುಸರಿಸಬೇಕಿತ್ತು. ಹೀಗಾಗಿ ಶಿಲ್ಪಗಳು ಸಾಂಪ್ರದಾಯಿಕ ಹಿನ್ನೆಲೆಯಲ್ಲಿ ರಚನೆಯಾಗುತ್ತ ಬಂದಿವೆ. ಈ ಶಿಲ್ಪವು ಕೂಡಾ ಕಂಬದ ಮೇಲೆ ಉಬ್ಬು ಶಿಲ್ಪವಾಗಿ ರಚನೆಗೊಂಡಿದೆ.

---

೬. ಈ ಶಿಲ್ಪವು ಸದ್ಯ ಹಂಪಿಯ ಕಡಲೆಕಾಳು ಗಣೇಶ ದೇವಸ್ಥಾನದ ಮುಖ ಮಂಟಪದ ಕಂಬದ ಮೇಲಿದೆ.

೭. ಈ ಶಿಲ್ಪವು ಬಾದಾಮಿಯ ಚಾಲುಕ್ಯರ ಕಾಲದ ದೇವಾಲಯದಲ್ಲಿ.

೮. ಈ ಶಿಲ್ಪವು ಹಂಪಿಯ ವಿರೂಪಾಕ್ಷ ದೇವಾಲಯದ ಪ್ರಕಾರದ ಗೋಡೆಯ ಕಂಬದ ಮೇಲಿದೆ

### ೬. ಕುಳಿತ ಗಣೇಶ ಶಿಲ್ಪ

ಈ ಶಿಲ್ಪವು ೨೦೦೦ದಲ್ಲಿ ರಚನೆಯಾಗಿದ್ದು, ಬಾದಾಮಿ ಬನಶಂಕರಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಸ್ತುಸಂಗ್ರಹದಲ್ಲಿದೆ.[೯] ೧೧/೨X೧ ಅಡಿ ಅಳತೆಯಲ್ಲಿದ್ದು, ಅರ್ಧಾಸನದಲ್ಲಿ ಕುಳಿತಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶವನ್ನು ಹೊಂದಿದೆ. ಕೆಳಗಿನ ಬಲಗೈ ಅಭಯಹಸ್ತ, ಎಡಗೈಯಲ್ಲಿ ಮೋದಕ ಪಾತ್ರೆ ಹಿಡಿದಿದೆ. ಅವನ ಸೊಂಡಿಲು ಮೋದಕ ಪಾತ್ರೆಯನ್ನು ತಲುಪಿದೆ. ಇಲ್ಲಿ ಏಕದಂತನಾಗಿದ್ದು, ಅವನ ಹಿಂದೆ ಪ್ರಭಾವಳಿಯು ಇದೆ. ಪ್ರಭಾವಳಿಯಲ್ಲಿ ಸುಂದರವಾದ ವಿನ್ಯಾಸವಿದೆ. ಗಣೇಶನು ಚೌಕಾಕಾರದ ಪೀಠದ ಮೇಲೆ ಕುಳಿತಿದ್ದು, ಆ ಪೀಠದಲ್ಲಿ ಅವನ ವಾಹನವಾದ ಇಲಿಯನ್ನು ಕೆತ್ತಲಾಗಿದೆ. ಕೊರಳಲ್ಲಿ ಹಾರವಿದೆ. ನಾಗಬಂಧವನ್ನು ಹೊಂದಿದೆ. ಒಟ್ಟಾರೆಯಾಗಿ ಈ ಶಿಲ್ಪವನ್ನು ನೋಡಿದಾಗ ಅಭಯಹಸ್ತವಿರುವುದರಿಂದ ಬೇಡಿದ ವರವನ್ನು ಸಲಹುತ್ತೇನೆಂದು ಧೈರ್ಯ ನೀಡುತ್ತಿರುವ ಸೂಚಕವಾಗಿದೆ.

### ೭. ಗಣೇಶ ಶಿಲ್ಪ

ಈ ಶಿಲ್ಪವು ಹಂಪಿಯ ಕಡಲೆಕಾಳು ಗಣೇಶ ದೇವಸ್ಥಾನದ ಮುಖ ಮಂಟಪದ ಕಂಬದ ಮೇಲಿದೆ. ಇದು ಸಹ ವಿಜಯನಗರ ಕಾಲದಲ್ಲಿ ರಚನೆಯಾಗಿದ್ದು,[೧೦] ೧೧/೨X೧ ಅಡಿ ಅಳತೆಯಲ್ಲಿದ್ದು, ಈ ಶಿಲ್ಪ ಕಂಬದ ಮೇಲೆ ಸೌಂದರ್ಯದ ಹಿನ್ನೆಲೆಯಲ್ಲಿ ರಚನೆಯಾಗಿದ್ದು, ಭದ್ರಪೀಠದಲ್ಲಿ ಕುಳಿತ ಈ ಶಿಲ್ಪವು ಅರ್ಧಾಸನದಲ್ಲಿದೆ. ನಾಲ್ಕು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ (ಅಂಕುಶ), ಎಡಗೈಯಲ್ಲಿ ಪಾಶವಿದೆ. ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆ ನಾಗಬಂಧವನ್ನು ಉದರಕ್ಕೆ ಧರಿಸಲಾಗಿದೆ. ಎಲ್ಲ ಗಣೇಶನ ಶಿಲ್ಪಗಳಲ್ಲಿ ಅಂಕುಶ ಮತ್ತು ಪಾಶವನ್ನು ಕೆತ್ತಲಾಗಿರುತ್ತದೆ. ಏಕೆಂದರೆ ಗಣೇಶನು ವಿಘ್ನ ನಿವಾರಕವಾದ್ದರಿಂದ ಮನುಷ್ಯನಿಗೆ ಬರುವ ರೋಗಗಳಿಂದ ಮುಕ್ತನಾಗುವ ಸೂಚಕವಾಗಿ ಕೆತ್ತಲಾಗಿದೆ.

### ೮. ಗಣೇಶ ಶಿಲ್ಪ

ಬಾದಾಮಿಯ ಚಾಲುಕ್ಯರ ಕಾಲದಲ್ಲಿ ರಚನೆಯಾಗಿದ್ದು, ಶಿಲ್ಪವು ಪಟ್ಟದ ಕಲ್ಲಿನ ಪಾಪಾನಾಥ ದೇವಾಲಯದಲ್ಲಿದೆ.[೧೧] ಈ ಶಿಲ್ಪವು ಎರಡು ಕೈಗಳನ್ನು ಹೊಂದಿದ್ದು, ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆಯನ್ನು, ಮೂರು ಎಳೆಯ ಯಜ್ಞೋಪವಿತವಿದೆ. ಚೌಕಾಕಾರದ ಪೀಠದಲ್ಲಿ ಕಮಲದ ದಳಗಳಿರುವಂತೆ ರಚಿಸಲಾಗಿದೆ. ಕರಂಡ ಮುಕುಟವಿದೆ. ಯಜ್ಞೋಪವಿತ ಇದು ಹಿಂದಿನ ಕಾಲದಲ್ಲಿ ಯಜ್ಞದ ಸಮಯದಲ್ಲಿ ಉಪವೀತದ ಮಾದರಿಯಲ್ಲಿ ಕೃಷ್ಣಾಜಿನವನ್ನು ಧರಿಸುತ್ತಿದ್ದ ಅದನ್ನು ಯಜ್ಞೋಪವಿತ ಎನ್ನ ತೊಡಗಿದರು. ಇದರಲ್ಲಿ ಚರ್ಮವು ಎಡಭುಜದ ಮೇಲಿಂದ ಹಾದು ದೇಹವನ್ನಾಧರಿಸಿ ಬಲಭುಜದ ಕೆಳಗೆ ಹಾದು ಹಿಂದಕ್ಕೆ ಹೋಗುತ್ತದೆ. ವಿ.ವಿ.

---

೯. ಈ ಶಿಲ್ಪವು ಬಾದಾಮಿ ಬನಶಂಕರಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಸ್ತುಸಂಗ್ರಹದಲ್ಲಿದೆ.

೧೦. ಈ ಶಿಲ್ಪವು ಸದ್ಯ ಹಂಪಿಯ ಕಡಲೆಕಾಳು ಗಣೇಶ ದೇವಸ್ಥಾನದ ಮುಖ ಮಂಟಪದ ಕಂಬದ ಮೇಲಿದೆ.

೧೧. ಈ ಶಿಲ್ಪವು ಪಟ್ಟದ ಕಲ್ಲಿನ ಪಾಪಾನಾಥ ದೇವಾಲಯದಲ್ಲಿದೆ.

ಸ್ಮಿತ್‌ರವರ ಪ್ರಕಾರ ಗುಪ್ತರ ಕಾಲ ಮತ್ತು ಪೂರ್ವದ ಚಾಲುಕ್ಯರ, ಪಲ್ಲವರ ಕಾಲದಿಂದ ಕಂಡುಬರುತ್ತದೆ. ಇದನ್ನು ಹೆಚ್ಚಾಗಿ ದೇವ ಮೂರ್ತಿಗಳಲ್ಲಿ ಕಾಣುತ್ತೇವೆ.

**೯. ಕುಳಿತ ಗಣೇಶ**

ಈ ಶಿಲ್ಪವು ಬಾದಾಮಿಯ ಭೂತನಾಥ ದೇವಾಲಯದ ಹಿಂದಿನ ಪಂಚಲಿಂಗ ಪಡಿಯ ಮೇಲೆ ಚಾಲುಕ್ಯರ ಕಾಲದಲ್ಲಿ ರಚನೆಯಾಗಿದ್ದು,[೧೨] ಅರ್ಧಾಸನದಲ್ಲಿ ಕುಳಿತಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆ ಇದ್ದು ಈ ಶಿಲ್ಪದಲ್ಲಿ ಯಾವುದೇ ಅಲಂಕರಣ ಕಂಡುಬರುವುದಿಲ್ಲ. ಈ ಶಿಲ್ಪವು ದೇವಾಲಯದ ಕೋಷ್ಟಕದಲ್ಲಿ ರಚಿಸಿರುವ ಶಿಲ್ಪ ಕೆಂಪು ಮರಳುಗಲ್ಲಿನಲ್ಲಿ ರಚಿತವಾಗಿದೆ. ಈ ಶಿಲ್ಪವು ಸಹ ಸುಂದರವಾಗಿ ರಚನೆಯಾಗಿದ್ದು ಕಂಡುಬರುತ್ತದೆ.

**೧೦. ಕುಳಿತ ಗಣೇಶ ಶಿಲ್ಪ**

ಈ ಶಿಲ್ಪವು ಹಂಪಿಯ ವಿರೂಪಾಕ್ಷ ದೇವಾಲಯದ ಮುಖ ಮಂಟಪದ ಕಂಬದ ಮೇಲೆ ರಚನೆಯಾಗಿದ್ದು,[೧೩] ೧೧/೨X೧ ಅಡಿ ಅಳತೆಯಲ್ಲಿದ್ದು, ಅರ್ಧಾಸನದಲ್ಲಿ ಕುಳಿತಿದ್ದು ನಾಲ್ಕು ಕೈಯಗಳನ್ನು ಹೊಂದಿದೆ. ಮೇಲಿನ ಬಲಗೈಯಲ್ಲಿ ಪುಷ್ಪದಂತ ವಸ್ತುವನ್ನು ಹಿಡಿದಿದೆ. ಎಡಗೈಯಲ್ಲಿ ವಿಶಿಷ್ಟವಾದ ವಸ್ತುವನ್ನು ಹಿಡಿದಂತಿದೆ. ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಬೀಜಪೂರವನ್ನು ಹಿಡಿದಿದೆ. ವೃತ್ತಾಕಾರದ ಪೀಠದಲ್ಲಿ ಕುಳಿತ ಉದರ ಬಂಧವಿದೆ. ಯಾವುದೇ ರೀತಿಯ ಆಭರಣಗಳು ಇಲ್ಲಿ ಕಂಡುಬರುವುದಿಲ್ಲ. ಈ ಶಿಲ್ಪವು ಕಂಬದ ಮೇಲೆ ರಚನೆಯಾಗಿದೆ. ಇದು ಸೌಭಾಗ್ಯದ ಸಂಕೇತವಾಗಿ ಕಂಡುಬರುತ್ತದೆ.

**೧೧. ನೃತ್ಯ ಗಣೇಶ ಶಿಲ್ಪ**

ವಿಜಯನಗರ ಕಾಲದಲ್ಲಿ ೧೬ನೇ ಶತಮಾನದಲ್ಲಿ ಹಂಪಿಯ ಕೃಷ್ಣ ದೇವಸ್ಥಾನದ ಮುಖ ಮಂಟದ ಕಂಬದಲ್ಲಿ ರಚನೆಯಾಗಿದೆ.[೧೪] ನೃತ್ಯ ಗಣೇಶ ಶಿಲ್ಪವು ಭದ್ರ ಪೀಠದ ಮೇಲೆ ನೃತ್ಯ ಮಾಡುವ ಭಂಗಿಯಲ್ಲಿದೆ. ಬಲಗಾಲನ್ನು ಮೇಲಕ್ಕೆತ್ತಿ, ಎಡಗಾಲನ್ನು ಪೀಠದ ಮೇಲೆ ಇರಿಸಿದೆ. ಈ ಶಿಲ್ಪವು ಚತುರ್ಭುಜವನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ, ಮೇಲಿನ ಎಡಗೈಯಲ್ಲಿ ಡೋಲ ಬಾರಿಸುವ ಹಸ್ತವಾಗಿದೆ. ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆ ಇದೆ. ಕರಂಡ ಮುಕುಟವನ್ನು ಹೊಂದಿದೆ. ಕೊರಳಲ್ಲಿ ಹಾರಗಳಿವೆ. ಮೂರು ಎಳೆಯ ಯಜ್ಞೋಪವಿತವಿದೆ. ಕೈಯಗಳಲ್ಲಿ ಕೈಕಡಗ, ಕಾಲುಗಳಲ್ಲಿ ಕಾಲುಕಡಗಗಳು, ಎದೆಯ ಮೇಲೆ ಹಾರದ ಅಲಂಕರಣವಿದೆ. ಉದರಕ್ಕೆ ನಾಗಬಂಧವನ್ನು ಹೊಂದಿದೆ. ಈ ಶಿಲ್ಪವು ಗ್ರ್ಯಾನೈಟ್

---

೧೨. ಈ ಶಿಲ್ಪವು ಬಾದಾಮಿಯ ಭೂತನಾಥ ದೇವಾಲಯದ ಹಿಂದಿನ ಪಂಚಲಿಂಗ ಪಡಿಯ ಮೇಲಿದೆ.

೧೩. ಈ ಶಿಲ್ಪವು ಹಂಪಿಯ ವಿರೂಪಾಕ್ಷಿ ದೇವಾಲಯದ ಮುಖ ಮಂಟಪದ ಕಂಬದ ಮೇಲಿದೆ.

೧೪. ಈ ಶಿಲ್ಪವು ಹಂಪಿಯ ಕೃಷ್ಣ ದೇವಸ್ಥಾನದ ಮುಖ ಮಂಟದ ಕಂಬದ ಮೇಲಿದೆ.

ಶಿಲೆಯಿಂದ ರಚನೆ ಮಾಡಲಾಗಿದೆ. ವಿಜಯನಗರದ ಕಾಲಕ್ಕೆ ಸೇರಿದ ಶಿಲ್ಪವಾಗಿದೆ. ಈ ಶಿಲ್ಪವು ಕಂಬದ ಮೇಲೆ ರಚನೆಯಾಗಿದ್ದು ಬಹಳ ಸುಂದರವಾಗಿ ಮೂಡಿಬಂದಿದೆ.

### ೧೨. ನಿಂತ ಗಣೇಶ ಶಿಲ್ಪ

ಈ ಶಿಲ್ಪವು ಚಾಲುಕ್ಯರ ಕಾಲದಲ್ಲಿ ರಚನೆಯಾಗಿದೆ.[೧೫] ನಿಂತ ಭಂಗಿಯಲ್ಲಿದ್ದು ದ್ವಿಭುಜವನ್ನು ಹೊಂದಿದೆ. ಬಲಗೈ ಡೋಲ ಹಸ್ತವಾಗಿದೆ. ಎಡಗೈಯಲ್ಲಿ ದಂತವನ್ನು ಹಿಡಿದಿದ್ದಾನೆ. ಯಜ್ಞೋಪವಿತವನ್ನು ಹೊಂದಿದೆ. ದ್ವಿಭಂಗಿಯಲ್ಲಿ ನಿಂತಿರುವ ಈ ಶಿಲ್ಪವು ನಾಟ್ಯಕ್ಕೆ ತಕ್ಕಂತೆ ಡೋಲು ಬಾರಿಸುವ ಭಾಸವಾಗುತ್ತದೆ. ಏಕೆಂದರೆ ಈ ಶಿಲ್ಪವು ಬಾದಾಮಿಯ ಮೊದಲನೆಯ ಗುಹೆಯಲ್ಲಿರುವ ೧೦೮ ಭಂಗಿಯ ನಟರಾಜ ಶಿಲ್ಪದ ಪಕ್ಕದಲ್ಲಿ ಈ ಗಣೇಶನ ಶಿಲ್ಪವಿದೆ. ಶಿವನು ನೃತ್ಯ ಭಂಗಿಯಲ್ಲಿದ್ದಾನೆ. ಇನ್ನಿತರ ಶಿಲ್ಪಗಳನ್ನು ಇಲ್ಲಿ ಕಾಣಬಹುದಾಗಿದೆ. ಗಣೇಶನನ್ನು ವಾದ್ಯ ನುಡಿಸುವವರ ಗುಂಪಿಗೆ ಸೇರಿಸಲಾಗಿದೆ. ಈ ಶಿಲ್ಪದಲ್ಲಿ ಯಾವುದೇ ರೀತಿಯ ಅಲಂಕಾರಗಳು ಕಂಡುಬರುವುದಿಲ್ಲ. ತಲೆಯ ಹಿಂಭಾಗದಲ್ಲಿ ಅರ್ಧಚಂದ್ರಾಕೃತಿಯ ಪ್ರಭಾವಳಿಯನ್ನು ಹೊಂದಿದೆ.

### ೧೩. ನಟರಾಜ ಶಿಲ್ಪದ ಪಕ್ಕದಲ್ಲಿ ಗಣೇಶ ಶಿಲ್ಪ

ಈ ಶಿಲ್ಪವು ಐಹೊಳೆಯ ರಾವಣ ಪಡಿ ದೇವಾಲಯದಲ್ಲಿ ೬ನೇ ಶತಮಾನದಲ್ಲಿ ರಚನೆಯಾಗಿದೆ.[೧೬] ಹತ್ತು ಕೈಯಗಳನ್ನು ಹೊಂಧಿರುವ ನಟನ ಶಿಲ್ಪದ ಬಲಗಡೆ ನಿಂತ ಗಣೇಶ ಶಿಲ್ಪವಿದೆ. ಎಡಗಡೆ ಪಾರ್ವತಿ ಮತ್ತು ಸೇವಕಿಯರ ಶಿಲ್ಪಗಳಿವೆ. ಗಣೇಶನ ಶಿಲ್ಪವನ್ನು ನೋಡಿದಾಗ ಬಲಗೈಯಲ್ಲಿ ಅಂಕುಶವನ್ನು ಹಿಡಿದಂತಿದೆ. ಎಡಗೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದುಕೊಂಡಿರುವ ಹಾಗಿದೆ. ಕೊರಳಲ್ಲಿ ಆಭರಣಗಳು ಯಜ್ಞೋಪವಿತವಿದೆ. ಈ ಶಿಲ್ಪವು ಕುಬ್ಜವಾಗಿದ್ದು ಸುಂದರವಾಗಿ ರಚಿತವಾಗಿದೆ.

### ೧೪. ಉಚ್ಚಿಸ್ಟ ಗಣಪತಿ ಶಿಲ್ಪ

ಈ ಶಿಲ್ಪವು ಹಂಪಿಯ ವಿರೂಪಾಕ್ಷ ದೇವಾಲಯದ ಮುಖ ಮಂಟಪದ ಕಂಬದ ಮೇಲೆ ರಚನೆಯಾಗಿದ್ದು, ವಿಜಯನಗರ ಕಾಲದ ಶಿಲ್ಪವಾಗಿದೆ.[೧೭] ಈ ಗಣಪತಿ ಶಿಲ್ಪವು ಭದ್ರ ಪೀಠದ ಮೇಲಿದೆ. ಗಣೇಶನು ಅವನ ಹೆಂಡತಿಯ ಜೊತೆಯಲ್ಲಿ ಅರ್ಧಾಸನದಲ್ಲಿ ಕುಳಿತಿದ್ದು, ಆರು ಭುಜಗಳನ್ನು ಹೊಂದಿದ್ದಾನೆ. ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಕಮಲವಿದೆ. ಕರಂಡ ಮುಕುಟವನ್ನು ಹೊಂದಿದೆ. ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಪಾಶವಿದೆ. ಇನ್ನೊಂದು ಎಡಗೈ ದೇವಿಯನ್ನು ಬಳಸಿಕೊಂಡಿದೆ. ಉದರದಲ್ಲಿ ನಾಗಪಾಶವನ್ನು ಧರಿಸಲಾಗಿದೆ. ಭದ್ರ ಪೀಠದಲ್ಲಿ ಕುಳಿತಿದ್ದು, ಗಣೇಶನ ಸೊಂಡಿಲು ಪ್ರೇಯಸಿಯ ಗುಹ್ಯ ಸ್ಥಾನವನ್ನು ತಲುಪಿದ್ದು, ಗುಹ್ಯಸ್ಥಾನ

---

೧೫. ಈ ಶಿಲ್ಪವು ಬಾದಾಮಿಯ ಮೊದಲನೇ ಗುಹೆಯಲ್ಲಿರುವ ನಟರಾಜನ ಪಕ್ಕದಲ್ಲಿದೆ.

೧೬. ಈ ಶಿಲ್ಪಾಕೃತಿಯು ಐಹೊಳೆಯ ರಾವಣ ಪಡಿ ದೇವಾಲಯದಲ್ಲಿದೆ.

೧೭. ಈ ಶಿಲ್ಪವು ಹಂಪಿಯ ವಿರೂಪಾಕ್ಷಿ ದೇವಾಲಯದ ಮುಖ ಮಂಟಪದ ಕಂಬದ ಮೇಲಿದೆ

ಸ್ವಾದದ ಆಸಕ್ತಿಯುಳ್ಳವನಾಗಿದ್ದು ಕಾಮ ಮೋಹಿತನಾಗಿದ್ದಾನೆ. ಇಲ್ಲಿಯು ಗಣೇಶನು ಏಕದಂತನಾಗಿದ್ದಾನೆ. ಈ ಶಿಲ್ಪವು ದೇವಸ್ಥಾನದ ಕಂಬದ ಮೇಲೆ ಉಬ್ಬು ಶಿಲ್ಪದಲ್ಲಿ ರಚನೆಯಾಗಿದೆ.

**೧೫. ಕುಳಿತ ಗಣೇಶ**

ಇದು ವಿಜಯನಗರ ಕಾಲದಲ್ಲಿ ರಚನೆಯಾಗಿದೆ.[೧೮] ಈ ಗಣೇಶ ಶಿಲ್ಪವು ಹಂಪೆಯ ಸಾಸಿವೆ ಕಾಳು ಗಣೇಶ ಶಿಲ್ಪವಾಗಿದ್ದು, ಅರ್ಧಾಸನದಲ್ಲಿ ಕುಳಿತಿದೆ. ವಿಜಯನಗರ ಕಾಲದಲ್ಲಿ ಗಣೇಶನ ಶಿಲ್ಪಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಯಿತು. ಇವರ ಕಾಲದಲ್ಲಿ ದೊಡ್ಡ ದೊಡ್ಡ ಗಣೇಶನ ಶಿಲ್ಪಗಳು ರಚನೆಯಾಗಿರುವುದು ಕಂಡುಬರುತ್ತದೆ. ಕಡಲೆಕಾಳು ಗಣೇಶ, ಸಾಸಿವೆ ಕಾಳು ಗಣೇಶ ಎಲ್ಲ ದೇವಾಲಯದ ಕಂಬಗಳಲ್ಲಿ ಅಲಂಕಾರಿಕವಾಗಿ ಹಲವಾರು ಗಣೇಶನ ಉಬ್ಬು ಶಿಲ್ಪಗಳನ್ನು ರಚಿಸಲಾಯಿತು. ಇಲ್ಲಿ ಸಾಸಿವೆ ಕಾಳು ಗಣೇಶ ಶಿಲ್ಪ ಅತಿ ದೊಡ್ಡ ಗಣೇಶ ಶಿಲ್ಪ ಇದಾಗಿದೆ. ನಾಲ್ಕು ಕೈಯಗಳನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆ ಇದ್ದು ಮೂರು ಎಳೆಯ ಯಜ್ಞೋಪವಿತವಿದೆ. ದಕ್ಷ ಬಂಧವಿದೆ. ಕಂಠಹಾರಗಳಿಂದ ಉದರಕ್ಕೆ ನಾಗಬಂಧವಿದೆ. ಚೌಕಾಕಾರದ ಪೀಠದ ಮೇಲೆ ಕುಳಿತಿದೆ. ಕರಂಡ ಮಕುಟವನ್ನು ಹೊಂದಿದೆ. ಇಲ್ಲಿ ಗಣೇಶ ಶಿಲ್ಪವು ಏಕದಂತವಾಗಿದೆ.

**೧೬. ಕುಳಿತ ಗಣೇಶ ಶಿಲ್ಪ**

ಹಂಪೆಯ ಕಡಲೆಕಾಳು ಗಣೇಶ ಶಿಲ್ಪವಾಗಿದೆ.[೧೯] ಈ ಶಿಲ್ಪವು ಕುಳಿತ ಭಂಗಿಯಲ್ಲಿದ್ದು, ನಾಲ್ಕು ಕೈಗಳನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ (ಎಡ), ಪಾಶ ಈ ರೀತಿಯಾಗಿ (ಬಲ) ದಂತ (ಎಡ) ಮೋದಕ ಪಾತ್ರೆ, ಕರಂಡ ಮಕುಟವನ್ನು ಹೊಂದಿದೆ. ಈ ಶಿಲ್ಪವು ವಿಜಯನಗರದ ಶಿಲ್ಪಗಳಲ್ಲಿ ಬಹುದೊಡ್ಡ ಶಿಲ್ಪವಾಗಿದ್ದು ಈ ಶಿಲ್ಪಕ್ಕೆ ಕಡಲೆಕಾಳು ಗಣೇಶ ಎಂದು ಕರೆಯುತ್ತಾರೆ. ಚೌಕಾಕಾರದ ಪೀಠದ ಮೇಲೆ ಕುಳಿತಿದ್ದು, ಏಕದಂತವಾಗಿದ್ದಾನೆ. ಅವನ ಹೊಟ್ಟೆಯು ಭಗ್ನವಾಗಿದ್ದು ಯಾವುದೇ ರೀತಿಯ ಆಭರಣಗಳು ಕಂಡುಬರುವುದಿಲ್ಲ.

**೧೭. ಗಣೇಶ ಶಿಲ್ಪ**

ಈ ಶಿಲ್ಪವು ವಿಜಯನಗರ ಕಾಲದಲ್ಲಿ ರಚನೆಯಾಗಿದೆ.[೨೦]ಕುಳಿತ (ಅರ್ಧಾಸನದಲ್ಲಿ) ಭಂಗಿಯಲ್ಲಿದೆ. ನಾಲ್ಕು ಕೈಯಗಳನ್ನು ಹೊಂದಿದ್ದು ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದಿದೆ. ಹಜಾರ ರಾಮ ದೇವಾಲಯದಲ್ಲಿರುವ ಗಣೇಶ ಶಿಲ್ಪವಾಗಿದೆ. ಕೊರಳಹಾರವಿದೆ, ವಕ್ಷ ಬಂಧವಿದೆ, ನಾಗಬಂಧವಿದೆ, ಯಜ್ಞೋಪವಿತವಿದೆ, ಭದ್ರಪೀಠದಲ್ಲಿದೆ, ಕರಂಡ ಮಕುಟವನ್ನು ಹೊಂದಿದೆ, ಕಾಲುಗಡಗ, ಕೈಗಡಗವಿದೆ, ಗಣೇಶನು ಏಕದಂತವಾಗಿದ್ದಾನೆ.

---

೧೮. ಈ ಗಣೇಶ ಶಿಲ್ಪವು ಹಂಪೆಯ ಸಾಸಿವೆ ಕಾಳು ಗಣೇಶನ ಗುಡಿಯಲ್ಲಿದೆ.

೧೯. ಈ ಶಿಲ್ಪವು ಹಂಪೆಯ ಕಡಲೆಕಾಳು ಗಣೇಶ ಶಿಲ್ಪವಾಗಿದೆ.

೨೦. ಈ ಶಿಲ್ಪವು ಕಡಲೆಕಾಳು ಗಣೇಶ ದೇವಸ್ಥಾನದ ಮುಖ ಮಂಟಪದ ಕಂಬದ ಮೇಲಿದೆ.

**೧೮. ದ್ವಾರದ ಎರಡು ಬದಿಗೆ ಇರುವ ಶಿಲ್ಪಗಳು**

ಈ ಶಿಲ್ಪವು ಹಂಪೆಯ ಕೃಷ್ಣಾ ದೇವಸ್ಥಾನದ ದ್ವಾರ ಬಾಗಿಲಿನ ಒಳಗೋಡೆಯ ಬಲಬದಿ ಗೋಡೆಯ ಮೇಲೆ ರಚನೆಯಾಗಿದೆ.[೨೧] ಈ ಶಿಲ್ಪವು ಹಂಪೆಯ ದ್ವಾರದ ಎರಡು ಬದಿಗೆ ಲತಾ ಬಳ್ಳಿಗಳನ್ನು ಅಲಂಕಾರಿಕವಾಗಿ ಬಳಸಲಾಗಿದೆ. ಲತಾ ಬಳ್ಳಿಗಳಲ್ಲಿ ಸೌಂದರ್ಯಕ್ಕಾಗಿ ಹಲವಾರು ದೇವಾನುದೇವತೆಗಳ ಶಿಲ್ಪಗಳನ್ನು ರಚಿಸಲಾಗುತ್ತದೆ. ಇಲ್ಲಿ ದೇವತೆಗಳಲ್ಲಿ ಹೆಚ್ಚು ಬಳಸಲ್ಪಡುವ ದೇವನೆಂದರೆ ಗಣೇಶ. ಗಣೇಶನನ್ನು ಇಂತಹ ಲತಾ ಬಳ್ಳಿಯಲ್ಲಿ ಹೊಂದಿಕೊಂಡಂತೆ ಚಿತ್ರಿಸಲಾಗಿದೆ. ಈ ಶಿಲ್ಪದಲ್ಲಿ ಗಣೇಶ ನೃತ್ಯ ಭಂಗಿಯಲ್ಲಿದ್ದು, ಕೈಗಳಲ್ಲಿ ಪಾಶ, ಅಂಕುಶ, ದಂತ, ಮೋದಕ ಪಾತ್ರೆಯನ್ನು ಹಿಡಿದಿದ್ದಾನೆ. ಹೆಚ್ಚಾಗಿ ಗಣೇಶನ ಶಿಲ್ಪಗಳಲ್ಲಿ ಪಾಶ, ಅಂಕುಶ, ಮೋದಕ ಪಾತ್ರೆ, ದಂತ ಕಂಡುಬರುತ್ತದೆ.

**೧೯. ತ್ರಿಮುಖ ಗಣಪತಿ**

ಈ ಶಿಲ್ಪಾಕೃತಿಯು ೨೧/₂ ಅಡಿ ಎತ್ತರದಲ್ಲಿದ್ದು, ವಿಜಯನಗರ ಶೈಲಿಯಲ್ಲಿ ರಚನೆಯಾಗಿದೆ.[೨೨] ಈ ಕಲಾಕೃತಿಯಲ್ಲಿ ಮೂರು ಮುಖಗಳಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕವನ್ನು ಹಿಡಿದಿದ್ದು, ಸಮಭಂಗಿಯಲ್ಲಿ ನಿಂತಿದ್ದಾನೆ. ಇಲ್ಲಿ ಏಕದಂತನಾಗಿದ್ದು ಉದರಬಂಧವನ್ನು ಹೊಂದಲಾಗಿದೆ. ಕೊರಳಲ್ಲಿ ಆಭರಣಗಳು, ಸೊಂಟದಲ್ಲಿ ಆಭರಣಗಳು, ಕೈಗಡಗ, ಕಾಲಗಡಗಗಳು ಮತ್ತು ಕರಂಡ ಮುಕುಟವನ್ನು ಹೊಂದಿದೆ. ಈ ಶಿಲ್ಪವು ಕುಬ್ಜವಾಗಿದ್ದು ಸೊಂಡಿಲಲ್ಲಿ ಏನೋ ಹಿಡಿದಂತಿದೆ. ಇದು ವೃತ್ತಾಕಾರದ ಪೀಠದ ಮೇಲೆ ನಿಂತಿದ್ದು ಸುಂದರವಾಗಿ ಮೂಡಿಬಂದಿದೆ. ಈ ಶಿಲ್ಪವು ವಿರೂಪಾಕ್ಷ ದೇವಾಲಯದ ಗರ್ಭಗುಡಿಯ ಉತ್ತರ ದಿಕ್ಕಿನ ಹೊರ ಗೋಡೆಯ ಒಂದು ಕಮಾನಿನಲ್ಲಿದೆ. ಇದು ವಿಜಯನಗರ ಕಾಲದಲ್ಲಿ ರಚನೆಯಾಗಿದ್ದು, ೧೧/₂ ಅಡಿ ಅಳತೆಯಲ್ಲಿದೆ.

**೨೦. ಮೂಷಿಕ ಮೇಲೆ ಕುಳಿತ ಗಣೇಶ**

ಇದು ವಿಜಯನಗರ ಕಾಲದಲ್ಲಿ ರಚನೆಯಾಗಿದ್ದು, ೧೧/₂ ಅಡಿ ಅಳತೆಯಲ್ಲಿದೆ.[೨೩] ಈ ಶಿಲ್ಪದಲ್ಲಿ ಗಣಪತಿಯು ಇಲಿಯ ಮೇಲೆ ಕುಳಿತಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ಮೇಲಿನ ಎರಡು ಕೈಗಳಲ್ಲಿ ಅಂಕುಶ, ಪಾಶವನ್ನು ಹಿಡಿದಿದ್ದು ಕೆಳಗಿನ ಎರಡು ಕೈಗಳಲ್ಲಿ ದಂತ, ಬೀಜಪೂರವನ್ನು ಹಿಡಿದು ಏಕದಂತನಾಗಿದ್ದಾನೆ. ಗಣೇಶನು ಇಲಿಯ ಮೇಲೆ ಕುಳಿತು ಪ್ರಯಾಣಿಸುತ್ತಿರುವ ಸನ್ನಿವೇಶದಲ್ಲಿ ಇಲಿಗೆ ಭಾರವಾಗಿರುವುದನ್ನು ಕಾಣಬಹುದು. ಈ ಶಿಲ್ಪವು ಚೌಕಾಕಾರದ ಪೀಠದ ಮೇಲೆ ರಚನೆಯಾಗಿದೆ. ಈ ಶಿಲ್ಪವು ಅಲಂಕಾರಿಕ ಹಿನ್ನೆಲೆಯಲ್ಲಿ ರಚನೆಯಾಗಿದೆ. ಈ ಶಿಲ್ಪವು ವಿರೂಪಾಕ್ಷ ದೇವಾಲಯದ ಮುಖ ಮಂಟಪದ ಕಂಬದ ಮೇಲಿದೆ.

---

೨೧. ಈ ಶಿಲ್ಪವು ಹಂಪೆಯ ಕೃಷ್ಣಾ ದೇವಸ್ಥಾನದ ದ್ವಾರ ಬಾಗಿಲಿನ ಒಳಗೋಡೆಯ ಬಲಬದಿ ಗೋಡೆಯ ಮೇಲಿದೆ.

೨೨. ವಿರೂಪಾಕ್ಷ ದೇವಾಲಯದ ಗರ್ಭಗುಡಿಯ ಉತ್ತರ ದಿಕ್ಕಿನ ಹೊರ ಗೋಡೆಯ ಒಂದು ಕಮಾನಿನಲ್ಲಿದೆ.

೨೩. ಈ ಶಿಲ್ಪವು ವಿರೂಪಾಕ್ಷ ದೇವಾಲಯದ ಮುಖ ಮಂಟಪದ ಕಂಬದ ಮೇಲಿದೆ.

ಸಾಂಪ್ರದಾಯಿಕ ಶಿಲ್ಪಗಳನ್ನು ನೋಡಿದಾಗ ಈ ರೀತಿಯ ಆಯುಧಗಳು ನಮಗೆ ಗೋಚರಿಸುತ್ತವೆ. ಪುರಾಣಗಳ ಪ್ರಕಾರ ಗಣೇಶನು ಪುರುಷ ರೂಪದವನಾಗಿದ್ದರೂ ಸಾಂಪ್ರದಾಯಿಕ ಶಿಲ್ಪಗಳಲ್ಲಿ ಗಣೇಶನನ್ನು ಸ್ತ್ರೀ ರೂಪದಲ್ಲಿ ರಚನೆಯಾಗಿರುವುದು ಒಂದು ವಿಶೇಷವಾಗಿದೆ. ಭಾರತದ ನಾನಾ ಭಾಗಗಳ ಗುಡಿ–ದೇಗುಲಗಳಲ್ಲಿ ಗಣೇಶಾನಿ, ವಿನಯಕಿ, ಗಣೇಶಿನಿ, ವಿಘ್ನೇಶ್ವರಿ, ಗಣೇಶ್ವರಿ ಇತ್ಯಾದಿ ಹೆಸರುಗಳಲ್ಲಿ ಗಣೇಶನ ಸ್ತ್ರೀ ರೂಪ ವಿಗ್ರಹಗಳನ್ನು ಇಂದಿಗೂ ಕಾಣಬಹುದು. ಕರ್ನಾಟಕದ ಕಿಕ್ಕೇರಿಯ ಹೊಯ್ಸಳ ದೇಗುಲದಲ್ಲಿರುವ ಗಣೇಶಾನಿ ದೇಗುಲದ ಮದನಿಕಾ ವಿಗ್ರಹವೊಂದರ ಪೀಠದ ಅಡಿಯಲ್ಲಿದೆ. ಕರ್ನಾಟಕದಲ್ಲಿ ಅಲ್ಲದೇ ತಮಿಳನಾಡಿನ ಕೌರೈಕುಡಿಯ ದೇಗುಲದಲ್ಲಿರುವ ಗಣೇಶಾನಿ ಶಿಲ್ಪವನ್ನು ನೋಡಿದಾಗ ಗಣಪತಿಯ ಮೂವತ್ತೆರಡು ರೂಪಗಳನ್ನು ಹೇಳುವ ಮುಗ್ದಲ ಪುರಾಣವೊಂದಿದೆ. ಕೆಲವಕ್ಕೆ ಶಕ್ತಿಯನ್ನು ಸೇರಿಸುವ ಉದಾಹರಣೆಗಳು ಇವೆ. ಶಕ್ತಿ ಗಣಪತಿ, ಉಚ್ಚಿಷ್ಠ ಗಣಪತಿ, ಪಿಂಗಳ ಗಣಪತಿ, ಮಹಾ ಗಣಪತಿ ಹೀಗೆ ಮೊದಲಾದ ರೂಪಗಳನ್ನು ಸೇರಿಸಿ ರಚಿಸಿರಬಹುದು. ಈ ವ್ಯಾಘ್ರಪಾದ ಗಣೇಶನನ್ನು ನೋಡಿದಾಗ ಚಾಲುಕ್ಯರ ಕಾಲದಲ್ಲಿ ರಚನೆಯಾದ ಯಾಳಿಯನ್ನು ನಾವು ಉದಾಹರಿಸಬಹುದು. ಈ ಗಣೇಶನ ರೂಪಕ್ಕೆ ವ್ಯಾಘ್ರಪಾದವನ್ನು ಸೇರಿಸಿ ಕಾಲ್ಪನಿಕ ಶಿಲ್ಪವನ್ನು ರಚಿಸಿರಬಹುದು. ಆದರೆ ಕರ್ನಾಟಕದ ಕಿಕ್ಕೇರಿಯ ಹೊಯ್ಸಳ ದೇಗುಲದಲ್ಲಿರುವ ಗಣೇಶಾನಿ ಶಿಲ್ಪವನ್ನು ನೋಡಿದಾಗ ಇಲ್ಲಿ ದೇಹವು ಸ್ತ್ರೀಯದ್ದಾಗಿದೆ. ಆದ್ದರಿಂದ ಗಣೇಶಾನಿ ರಚನೆಯಾಗಿರಬಹುದೆಂದು ಹೇಳಬಹುದು. ಕೆಲವು ರೇಖಾಚಿತ್ರಗಳನ್ನು ಬಳಸಬಹುದಾಗಿದೆ. ಸಾಂಪ್ರದಾಯಿಕ ಶಿಲ್ಪಗಳನ್ನು ನೋಡಿದಾಗ ಈ ರೀತಿಯ ಆಯುಧಗಳು ನಮಗೆ ಕಂಡುಬರುತ್ತವೆ. ಆದರೆ ಆಧುನಿಕ ಯುಗದಲ್ಲಿ ಗಣೇಶನನ್ನು ವಿವಿಧ ಬಗೆಯಲ್ಲಿ ಬಳಸಿಕೊಳ್ಳುತ್ತಿರುವುದು ಶೋಚನೀಯ ಸಾಂಪ್ರಾಯಿಕವಾಗಿರುವುದನ್ನು ನಾವು ಕಾಣುತ್ತೇವೆ.

**********



೦೧. ಕುಳಿತ ಗಣೇಶ



೦೨ ನಿಂತ ಭಂಗಿ ಗಣೇಶ



೦೩ ಕುಳಿತ ಗಣೇಶ



೦೪ ಬಾದಾಮಿ ಗಣಪತಿ



೦೫. ನೃತ್ಯ ಗಣೇಶ ಶಿಲ್ಪ



೦೬. ಕುಳಿತ ಗಣೇಶ ಶಿಲ್ಪ



೦೭. ಗಣೇಶ ಶಿಲ್ಪ



೦೮. ಗಣೇಶ ಶಿಲ್ಪ



೦೯. ಕುಳಿತ ಗಣೇಶ



೧೦. ಕುಳಿತ ಗಣೇಶ ಶಿಲ್ಪ



೧೧. ನೃತ್ಯ ಗಣೇಶ ಶಿಲ್ಪ



೧೨. ನಿಂತ ಗಣೇಶ ಶಿಲ್ಪ



೧೩. ನಟರಾಜ ಪಕ್ಕದಲ್ಲಿರುವ ಗಣೇಶ ಶಿಲ್ಪ



೧೪. ಉಚ್ಛಿಷ್ಟ ಗಣಪತಿ ಶಿಲ್ಪ



೧೫. ಸಾಸಿವೆಕಾಳು ಗಣೇಶ



೧೬. ಕಡಲೆಕಾಳು ಗಣೇಶ



೧೭. ಗಣೇಶ ಶಿಲ್ಪ



೧೮. ದ್ವಾರದ ಬದಿಗೆ ಇರುವ ಶಿಲ್ಪ



೧೯. ತ್ರಿಮುಖ ಗಣಪತಿ



೨೦. ಮೂಷಿಕ ಮೇಲೆ ಕುಳಿತ ಗಣೇಶ

## ಅಧ್ಯಾಯ – ೫

# ಭಿತ್ತಿಚಿತ್ರ ಮಾಧ್ಯಮದಲ್ಲಿ ಗಣೇಶನ ಚಿತ್ರ–ಶಿಲ್ಪಗಳು

ಭಾರತೀಯ ಚಿತ್ರಕಲಾ ಪರಂಪರೆಯಲ್ಲಿ ಕರ್ನಾಟಕದ ಭಿತ್ತಿಚಿತ್ರಗಳಿಗೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಕನ್ನಡ ನಾಡಿನ ಜನತೆ ಭಿತ್ತಿಚಿತ್ರಗಳನ್ನು ರಚಿಸುವ ಮೂಲಕ ಕಲಾಕಾರರಾಗಿ ಭಿತ್ತಿಚಿತ್ರಗಳನ್ನು ಬರೆಯುವುದರೊಂದಿಗೆ ಕಲಾ ಪೋಷಕರಾಗಿದ್ದಾರೆ. ಈ ಭಿತ್ತಿಚಿತ್ರ ಪರಂಪರೆ ವ್ಯಕ್ತಿಯಿಂದ ವ್ಯಕ್ತಿಗೆ, ಸಮುದಾಯದಿಂದ ಸಮುದಾಯಕ್ಕೆ ಬೇರೆ ಬೇರೆಯಾಗಿ ಸೃಷ್ಟಿಗೊಂಡಿದೆ. ಪ್ರಾದೇಶಿಕತೆ ಆ ಪ್ರದೇಶದ ಜನರ ಜೀವನ ವಿಧಾನ, ಆಚಾರ–ವಿಚಾರ, ಧಾರ್ಮಿಕ ನಂಬಿಕೆ ಮುಂತಾದವುಗಳು ಅವರ ಭಿತ್ತಿಚಿತ್ರ ರಚನೆಯ ಮೇಲೆ ಪ್ರಭಾವ ಬೀರಿ ಈ ಪರಂಪರೆಯು ವೈವಿಧ್ಯಮಯವಾಗಿ ರೂಪಗೊಳ್ಳಲು ಕಾರಣವಾಗಿವೆ. ಯಾವುದೇ ಕಾಲದ ಭಿತ್ತಿಚಿತ್ರಗಳು ಆಯಾ ಕಾಲದ ಜನಜೀವನದ ವಿವರಗಳನ್ನು ಒಳಗೊಂಡಿರುತ್ತವೆ. ಹಾಗೆಯೇ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಇವು ಮಹತ್ವದ ಆಕರಗಳೂ ಆಗಿವೆ.

ಭಿತ್ತಿಚಿತ್ರವನ್ನು ಆಂಗ್ಲ ಭಾಷೆಯಲ್ಲಿ Mural Painting ಎಂದು ಕರೆಯಲಾಗಿದೆ. ಅನೇಕ ಶಬ್ದಕೋಶ ಮತ್ತು ವಿಶ್ವಕೋಶಗಳು ಭಿತ್ತಿಚಿತ್ರ ಕಲೆಯ ಅರ್ಥವ್ಯಾಪ್ತಿಯ ಬಗೆಗೆ ವಿವರಣೆ ಕೊಟ್ಟಿವೆ. ಕ್ಯಾಂಬ್ರಿಜ್ ವಿಶ್ವಕೋಶವು ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಭಿತ್ತಿವೆನಿಸಿದರೆ, ಗೋಡೆಯ ಮೇಲೆ ಕೆತ್ತಿ ಕೊರೆದು, ಅಂಟಿಸಿ ರೂಪಿಸಿದ ಕೃತಿಗಳು ಭಿತ್ತಿಶಿಲ್ಪದ ವ್ಯಾಪ್ತಿಯಲ್ಲಿ ಬರುತ್ತವೆ ಎಂದು ಹೇಳಿದೆ, ಆಕ್ಸ್‌ಫರ್ಡ್ ಶಬ್ದಕೋಶವು ಗೋಡೆ ಮತ್ತು ಮೇಲ್ಛಾವಣಿಗಳಲ್ಲಿ ಬರೆದ ಬಣ್ಣದ ಚಿತ್ರಗಳನ್ನು ಭಿತ್ತಿಚಿತ್ರಗಳೆಂದು ಕರೆದಿದೆ. ಪಿಬ್‌ಸ್ಟರ್ ನ್ಯೂ ವರ್ಲ್ಡ್ ಎನ್‌ಸೈಕ್ಲೋಪಿಡಿಯಾದಲ್ಲಿಯೂ ಸಹಿತ ಗೋಡೆ ಮತ್ತು ಮೇಲ್ಛಾವಣಿಗಳ ಮೇಲೆ ರಚನೆಯಾದ ಚಿತ್ರಗಳನ್ನು ಭಿತ್ತಿಚಿತ್ರಗಳೆಂದು ಹೇಳಿದೆ.[೧]

---

೧. ಡಾ. ಎಸ್.ಸಿ. ಪಾಟೀಲ, ಸತ್ಯಾನಂದ ಪಾತ್ರೋಟಿ (ಸಂ), ನಿಜದ ನೆಲೆ, ಡಾ. ಯಾದಪ್ಪ ಪರದೇಶಿ ಅವರ ಲೇಖನ ಪು–೪೬೦ ಮತ್ತು ೪೬೧

ಭಾರತದಲ್ಲಿಯೂ ಭಿತ್ತಿಚಿತ್ರಕಲೆ ಅತ್ಯಂತ ಪುರಾತನ ಕಾಲದಿಂದಲೆ ಕಂಡುಬರುತ್ತದೆ. ಮಧ್ಯಪ್ರದೇಶದ ಬಿಂಬೇಟಾ ಪಹಾರ್‌ಫರ್, ಆಡಮ್‌ಗೆಲ್, ಮಹಾದೇವ ಬೆಟ್ಟ, ಜೋಗಿಮಾರಾ ಗುಹೆಗಳಲ್ಲಿ ಕ್ರಿಪೂ. ೨೫೦೦ ರಿಂದ ೧೦೦೦ ವರ್ಷಗಳ ಹಿಂದಿನ ಪ್ರಾಗ್ಯೈತಿಹಾಸಿಕ ಭಿತ್ತಿಚಿತ್ರಗಳಿವೆ. ಕರ್ನಾಟಕವೂ ಸಹಿತ ಶ್ರೀಮಂತವಾದ ಭಿತ್ತಿಚಿತ್ರಗಳ ಪರಂಪರೆಯನ್ನು ಹೊಂದಿ ಬೀಡಾಗಿದೆ. ಪ್ರಾರಂಭಿಕ ಹಂತದಲ್ಲಿ ಪ್ರತಿನಿಧಿಸುವ ಪ್ರಾಗ್ಯೈತಿಹಾಸಿಕ ಗುಹಾವರ್ಣ ಚಿತ್ರಗಳು ಕರ್ನಾಟಕದಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿವೆ. ಬಾದಾಮಿ, ಐಹೊಳೆ, ರಾಮದುರ್ಗ ಬಳಿಯ ಖಾಜಿನಗುಡ್ಡ, ಹೀರೆ ಬೆನಕಲ್, ಹಂಪೆ, ಪಿಕ್ಕಿಹಾಳ, ತಾವರಗೆರೆ, ಕೊಪ್ಪಳ ಹೀಗೆ ಉತ್ತರ ಕರ್ನಾಟಕದಾದ್ಯಂತ ಅನೇಕ ಸ್ಥಳಗಳಲ್ಲಿ ಪ್ರಾಗ್ಯೈತಿಹಾಸಿಕ ಭಿತ್ತಿಚಿತ್ರಗಳು ರಚನೆಯಾಗಿವೆ.

ಮುಂದೆ ಶಿಷ್ಟ ಪರಂಪರೆಯ ಪ್ರಾರಂಭದ ಕಾಲದಲ್ಲಿ ಕೆಲವು ಭಿತ್ತಿಚಿತ್ರಗಳು ರಚನೆಯಾಗಿರುವುದು ಗೋಚರಿಸುತ್ತದೆ. ಇಂತಹ ಭಿತ್ತಿಚಿತ್ರಗಳು ಮೊಟ್ಟಮೊದಲಿಗೆ ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಕಂಡುಬರುತ್ತದೆ. ಇವರ ಕಾಲದಲ್ಲಿ ಬಾದಾಮಿ, ಐಹೊಳೆಯ ಗುಹೆಗಳಲ್ಲಿ ರಚನೆಯಾಗಿರುವುದು ಕಂಡುಬರುತ್ತದೆ. ಇಂತಹ ಶಿಷ್ಟ ಪದ ಭಿತ್ತಿಚಿತ್ರಗಳ ಕುರಿತಾಗಿ ಹಲವಾರು ಗ್ರಂಥಗಳು ವಿವರಣೆಯನ್ನು ನೀಡುತ್ತವೆ. ಮಾನಸೋಲ್ಲಾಸ, ಶಿವತತ್ವ ರತ್ನಾಕರ, ವಿಷ್ಣು ಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರದಾರ, ಶಿಲ್ಪರತ್ನ ಹೀಗೆ ಅನೇಕ ಗ್ರಂಥಗಳು ಶಿಷ್ಟಪದ ಭಿತ್ತಿಚಿತ್ರಗಳ ಬಗೆಗೆ ಉಲ್ಲೇಖಗಳನ್ನು ನೀಡುತ್ತವೆ. ಕ್ರಿ.ಶ. ೮ ರಿಂದ ೧೦ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರ ಕಾಲದಲ್ಲಿ, ಎಲ್ಲೋರಾದ ಗುಹಾಲಯಗಳಲ್ಲಿ ಭಿತ್ತಿಚಿತ್ರಗಳು ಕಂಡುಬರುತ್ತವೆ. ತದನಂತರ ಭಿತ್ತಿಚಿತ್ರಕಲೆ ಹೆಚ್ಚು ಪ್ರೋತ್ಸಾಹ ನೀಡಿದ ದೊರೆಗಳೆಂದರೆ ವಿಜಯನಗರದ ಅರಸರು. ಅವರ ಕಾಲದಲ್ಲಿ ಹಂಪೆ ಮಾತ್ರವಲ್ಲದೇ ಆಂಧ್ರ ಮತ್ತು ತಮಿಳನಾಡು ಅನೇಕ ಸ್ಥಳಗಳಲ್ಲಿ ಭಿತ್ತಿಚಿತ್ರಗಳು ರಚನೆಯಾದವು.

ವಿಜಯನಗರದ ಪತನದ ನಂತರ ಹಲವಾರು ಸಾಮಂತ ದೊರೆಗಳು ಭಿತ್ತಿಚಿತ್ರಗಳನ್ನು ಮುಂದುವರೆಸಿದರೆ. ಅವರ ಜೊತೆಗೆ ಸಂಸ್ಥಾನಿಕರು, ಮಠ–ಮಾನ್ಯದವರು ಮತ್ತು ಸಮಾಜದಲ್ಲಿನ ಪ್ರತಿಷ್ಠಿತ ವ್ಯಕ್ತಿಗಳು ಸಹ ತಮ್ಮ ಮನೆಗಳಲ್ಲಿ ಭಿತ್ತಿಚಿತ್ರ ರಚಿಸಿಕೊಂಡರು.[೨] ಇಂತಹ ಭಿತ್ತಿಚಿತ್ರಗಳಲ್ಲಿ ಹಲವಾರು ದೇವಾನುದೇವತೆಗಳ ಚಿತ್ರಗಳನ್ನು ರಚಿಸಿದರು. ಇವುಗಳಲ್ಲಿ ಶಿವ, ವಿಷ್ಣು, ಬ್ರಹ್ಮ, ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಚಿತ್ರಗಳು ವಿಷ್ಣುವಿನ ದಶಾವತಾರಗಳು ಮತ್ತು ವಿಶಿಷ್ಟ ದೇವಾನುದೇವತೆಗಳು, ಸರಸ್ವತಿ, ಆಂಜನೇಯ, ಗರುಡ ಹೀಗೆ ವಿವಿಧ ಚಿತ್ರಗಳನ್ನು ಸೃಜನಾತ್ಮಕ ರೀತಿಯಲ್ಲಿ ರಚಿಸಿದರು. ಆದರೆ ಗಣೇಶ ಚಿತ್ರಗಳು ವೈವಿಧ್ಯಮಯ ರೀತಿಯಲ್ಲಿ ರಚನೆಗೊಂಡಿರುವುದು ಕಂಡುಬರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಗಣಪತಿಯನ್ನು ಪೂಜಿಸದ ಭಕ್ತನಿಲ್ಲ, ಗಣಪತಿಯ ಚಿತ್ರ ಬಿಡಿಸದ ಕಲಾವಿದನಿಲ್ಲ ಎಂಬಂತೆ ಆಧುನಿಕ ಯುಗದಲ್ಲಿ ಗಣೇಶನು ವಿವಿಧ ರೀತಿಯಲ್ಲಿ

---

೨. ನಿಜದ ನೆಲೆ, ಡಾ. ಎಸ್.ಸಿ. ಪಾಟೀಲ, ಸತ್ಯಾನಂದ ಪಾತ್ರೋಟಿ (ಸಂ), ಡಾ. ಯಾದಪ್ಪ ಪರದೇಶಿ ಅವರ ಲೇಖನ ಪು–೪೬೦ ಮತ್ತು ೪೬೩

ಸೃಷ್ಟಿಗೊಳ್ಳುತ್ತಿದ್ದಾನೆ. ಇತ್ತೀಚಿನ ಸಂದರ್ಭದಲ್ಲಿ ಭಿತ್ತಿಶಿಲ್ಪಗಳು ಹೆಚ್ಚಾಗಿ ರಚನೆಯಾಗುತ್ತಿದ್ದು ಅದರಲ್ಲಿಯೂ ಗಣೇಶನನ್ನು ರಚಿಸದ ಕಲಾವಿದನಿಲ್ಲ ಎನ್ನುವಷ್ಟರಮಟ್ಟಿಗೆ ಗಣೇಶನ ಚಿತ್ರಗಳು ಸೃಷ್ಟಿಗೊಂಡಿವೆ.

ಭಿತ್ತಿಚಿತ್ರವು ಗುಹಾಂತರ ದೇವಾಲಯಗಳಿಂದ ಕಟ್ಟಲ್ಪಟ್ಟ ದೇವಾಲಯಗಳವರೆಗೆ ಮುನ್ನಡೆ ಪಡೆದುಕೊಂಡು ಬಂದಿದೆ. ವಿಜಯನಗರದ ಪಥನದ ನಂತರ ಭಿತ್ತಿಶಿಲ್ಪಗಳನ್ನು ರಚಿಸುವುದು ಹಿನ್ನೆಡೆಯಾಯಿತು. ಈಗಿನ ಆಧುನಿಕ ಯುಗದಲ್ಲಿ ಸೃಜನಶೀಲ ಭಿತ್ತಿಚಿತ್ರ ಶಿಲ್ಪಗಳು ರಚನೆಯಾಗುತ್ತಿವೆ. ಇದರಲ್ಲಿಯೂ ಸಹ ಗಣೇಶ ಶಿಲ್ಪಗಳು ರಚನೆಯಾಗುತ್ತಿರುವುದು ಕಂಡುಬರುತ್ತದೆ.

### ೧. ಸಿಂಹಾಸನದ ಮೇಲೆ ಕುಳಿತ ಗಣೇಶ



ಈ ಭಿತ್ತಿಚಿತ್ರವು ೨೦೦೫ರಲ್ಲಿ ಟೈಲ್ಸ್ ಮೇಲೆ ರಚನೆಯಾಗಿದ್ದು, ರಾಯಚೂರಿನ ಶ್ರೀ ಪಾಂಡುರಂಗ ವಿಠ್ಠಲ ರುಕ್ಮಿಣಿ ದೇವಸ್ಥಾನದ ಬಾಗಿಲದ ಒಳಗೋಡೆಯ ಮೇಲಿದೆ.[೩] ಈ ಕಲಾಕೃತಿಯಲ್ಲಿ ಲಕ್ಷ್ಮೀ ನಿಂತಿದ್ದು ಸರಸ್ವತಿ ಮತ್ತು ಗಣೇಶನು ಕುಳಿತಿರುವುದನ್ನು ಕಾಣಬಹುದು. ಇಲ್ಲಿ ಗಣೇಶನು ಸಿಂಹಾಸನದ ಮೇಲೆ ಕುಳಿತಿದ್ದು, ಸುಂದರವಾದ ಕಣ್ಣು, ಉಬ್ಬಿರುವಂತಹ ಹಣೆ, ಹಣೆಯ ಮೇಲೆ ತ್ರಿಶೂಲ ಆಕಾರ ಹೋಲುವ ಕೆಂಪುನಾಮ, ತನ್ನ ಸೊಂಡಿಲನ್ನು ಮಡಚಿಕೊಂಡಿದ್ದು, ದೊಡ್ಡ ಕಿವಿಗಳನ್ನು ಹೊಂದಿದ್ದು ಸುಂದರವಾದ ಕಿರೀಟವನ್ನು ಹೊಂದಿದ್ದಾನೆ. ಇಲ್ಲಿ ಗಣೇಶನಿಗೆ ನಾಲ್ಕು ಕೈಗಳಿದ್ದು, ಬಲಭಾಗದ ಕೈಗಳಲ್ಲಿ ಪರಶು ಅಭಯಹಸ್ತವನ್ನು ಹಿಡಿದಿದ್ದು, ಎಡಭಾಗದ ಕೈಗಳಲ್ಲಿ ಪಾಶ ಮೋದಕವನ್ನು ಹಿಡಿದಿದ್ದಾನೆ. ಕೊರಳಿಗೆ ವಿನ್ಯಾಸದಿಂದ ಸರಗಳು ಭುಜಕ್ಕೆ ಶ್ಯಾಲನ್ನು ಹಾಕಿಕೊಂಡಿದ್ದು ಹಸಿರು ಬಣ್ಣದಿಂದ ಕೂಡಿದೆ. ಮತ್ತು ಕೊರಳಿಗೆ ಒಂದು ಹೂವಿನ ಹಾರವನ್ನು ಹಾಕಿಕೊಂಡಿದ್ದು, ತನ್ನ ಸೊಂಟಕ್ಕೆ ಕೆಂಪು ಮತ್ತು ಹಳದಿ ಬಣ್ಣದ ಬಟ್ಟೆಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ಕೈಗಳಿಗೆ ಕೈಗಡಗ, ಕಾಲುಗಳಿಗೆ ಕಾಲಗಡಗವನ್ನು ಹಾಕಿಕೊಂಡಿದ್ದು ಸಿಂಹಾಸನದ ಮೇಲೆ ಕುಳಿತಿದ್ದಾನೆ. ಇಲಿಯು ಕೆಳಭಾಗದಲ್ಲಿ ಕುಳಿತಿದ್ದು ಗಣೇಶನಿಗೆ ತನ್ನ ಮುಂದಿನ ಕಾಲುಗಳಿಂದ ಫಲಗಳನ್ನು ಹಿಡಿದು ನಿಂತಿದ್ದು, ಸುಂದರವಾಗಿ ಮೂಡಿಬಂದಿರುವುದನ್ನು ಕಾಣಬಹುದು. ಕಲಾಕೃತಿಯನ್ನು ನೋಡಿದರೆ ಶ್ರೀಮಂತಿಕೆಯನ್ನು ತೋರಿಸುತ್ತದೆ.

### ೨. ತಂದೆ-ತಾಯಿಯರೊಂದಿಗೆ ಗಣೇಶ

ಈ ಭಿತ್ತಿಚಿತ್ರವು ೨೦೦೫ರಲ್ಲಿ ಟೈಲ್ಸ್ ಮೇಲೆ ರಚನೆಯಾಗಿದ್ದು, ರಾಯಚೂರಿನ ಶ್ರೀ ಪಾಂಡುರಂಗ ವಿಠ್ಠಲ ರುಕ್ಮಿಣಿ ದೇವಸ್ಥಾನದ ಬಾಗಿಲದ ಒಳಗೋಡೆಯ ಮೇಲೆ ರಚನೆಯಾಗಿದೆ.[೪] ಇಲ್ಲಿ ತನ್ನ ತಂದೆ-ತಾಯಿಯರ ಜೊತೆಯಲ್ಲಿ ಕುಳಿತಿರುವಂತಹ ಗಣಪತಿಯನ್ನು ನೋಡುತ್ತೇವೆ. ಬಾಲ ಗಣಪತಿಯನ್ನು ಇಲ್ಲಿ ಸುಂದರವಾಗಿ ರಚನೆ ಮಾಡಿದ್ದಾರೆ. ಕಣ್ಣು, ಸೊಂಡಿಲು, ಕಿವಿಗಳು, ದಂತಗಳನ್ನು ಕಾಣಬಹುದು. ಮೈಬಣ್ಣವು ಗುಲಾಬಿ ಮತ್ತು ಹಳದಿ ಬಣ್ಣಗಳಿಂದ ಮಿಶ್ರಿತವಾಗಿದ್ದು,

---

೩. ಈ ಭಿತ್ತಿಚಿತ್ರವು ೨೦೦೫ರಲ್ಲಿ ಟೈಲ್ಸ್ ಮೇಲೆ ರಚನೆಯಾಗಿದ್ದು, ರಾಯಚೂರಿನ ಶ್ರೀ ಪಾಂಡುರಂಗ ವಿಠ್ಠಲ ರುಕ್ಮೀಣಿ ದೇವಸ್ಥಾನದ ಬಾಗಿಲದ ಒಳಗೋಡೆಯ ಮೇಲಿದೆ.

೪. ಈ ಭಿತ್ತಿಚಿತ್ರವು ೨೦೦೫ರಲ್ಲಿ ಟೈಲ್ಸ್ ಮೇಲೆ ರಚನೆಯಾಗಿದ್ದು, ರಾಯಚೂರಿನ ಶ್ರೀ ಪಾಂಡುರಂಗ ವಿಠ್ಠಲ ರುಕ್ಮೀಣಿ ದೇವಸ್ಥಾನದ ಬಾಗಿಲದ ಒಳಗೋಡೆಯ ಮೇಲಿದೆ.

ತಲೆಗೆ ವಿವಿಧ ವಿನ್ಯಾಸದಿಂದ ಕೂಡಿದಂತಹ ಕಿರೀಟವನ್ನು ರಚಿಸಿದ್ದಾರೆ. ಅದು ಬಂಗಾರ ಬಣ್ಣದಿಂದ ಕೂಡಿದೆ. ಕೊರಳಿಗೆ ವಿವಿಧ ರೀತಿಯ ಸರಗಳನ್ನು ಹಾಕಿಕೊಂಡಿದ್ದು ಬಲಗೈಯಲ್ಲಿ ಲೇಖನಿ ಹಿಡಿದುಕೊಂಡು, ಎಡಗೈಯಲ್ಲಿ ಮೋದಕ  ಪಾತ್ರೆಯನ್ನು ಹಿಡಿದಿರುವುದನ್ನು ಕಾಣಬಹುದು. ಸೊಂಟಕ್ಕೆ ಹಳದಿ ಬಣ್ಣದಿಂದ ಕೂಡಿದಂತ ಬಟ್ಟೆಯನ್ನು ತೊಟ್ಟಿದ್ದು, ಎರಡು ಕಾಲುಗಳನ್ನು ಶಿವನ ತೊಡೆಯ ಮೇಲೆ ಕುಳಿತು ಕೆಳಗೆ ಬಿಟ್ಟು ಕುಳಿತಿರುವುದನ್ನು ನೋಡುತ್ತೇವೆ. ಕಾಲಗಡಗಗಳನ್ನು ತೊಟ್ಟಿರುವುದನ್ನು ಮತ್ತು ಲೇಖನಿ ಹಿಡಿದಿರುವುದು ಈ ಕಲಾಕೃತಿಯಲ್ಲಿ ವಿಶೇಷವಾಗಿದೆ.

## ೩. ಭಿತ್ತಿ ಮೇಲೆ ರಚನೆಯಾದ ಗಣೇಶ ಚಿತ್ರಗಳು

ಈ ಭಿತ್ತಿಚಿತ್ರವು  ೨೦೦೫ರಲ್ಲಿ ಟೈಲ್ಸ್ ಮೇಲೆ ರಚನೆಯಾಗಿದ್ದು, ರಾಯಚೂರಿನ ಶ್ರೀ ಪಾಂಡುರಂಗ ವಿಠ್ಠಲ ರುಕ್ಮಿಣಿ ದೇವಸ್ಥಾನದ ಬಾಗಿಲದ ಒಳಗೋಡೆಯ ಮೇಲಿದೆ.[೫] ಈ ಕಲಾಕೃತಿಯಲ್ಲಿ ಆರು ಗಣೇಶನ ಚಿತ್ರಗಳಿವೆ. ಒಂದೊಂದು ಗಣೇಶನು ಬೇರೆ ಬೇರೆಯಾಗಿದ್ದು ಮುಗ್ದಲ ಪುರಾಣೋಕ್ತ ಗಣಪತಿಗಳಾಗಿವೆ. ಉಚ್ಛಿಷ್ಟ ಗಣಪತಿ, ನೃತ್ಯ ಗಣಪತಿ, ತರುಣ ಗಣಪತಿ ಹೀಗೆ ರಚನೆಯಾಗಿವೆ. ಈ ಗಣಪತಿಗಳಲ್ಲಿ ವಿಶೇಷವಾಗಿರುವುದು ಮಹಾ ಗಣಪತಿ, ಹೇರಂಬ ಗಣಪತಿ, ಬಾಲ ಗಣಪತಿ, ವೀರ ಗಣಪತಿ. ಮಹಾ ಗಣಪತಿಯು ದೇವಿಯನ್ನು ಎಡ ತೊಡೆಯ ಮೇಲೆ ಕೂಡಿಸಿಕೊಂಡಿದ್ದು, ಹತ್ತು ಕೈಗಳಿದ್ದು ಪ್ರತಿಯೊಂದು ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದು ಶಂಖ, ಚಕ್ರ, ತ್ರಿಶೂಲ, ಗದೆ, ದಂತ, ಪಾಶ ಮತ್ತು ಒಂದು ಕೈಯಲ್ಲಿ ದೇವಿಯನ್ನು ಹಿಡಿದುಕೊಂಡಿದ್ದಾನೆ.

ಉಚ್ಛಿಷ್ಟ ಗಣಪತಿಯು ಆರು ಕೈಗಳನ್ನು ಹೊಂದಿದ್ದು, ಅಂಕುಶ, ಪಾಶ, ಕಬ್ಬಿನ ಜಲ್ಲೆ, ಭತ್ತದ ತೆನೆ, ಅಭಯಹಸ್ತ, ಇನ್ನೊಂದು ಕೈಯಲ್ಲಿ ದೇವಿಯನ್ನು ಹಿಡಿದಿದ್ದಾನೆ. ತನ್ನ ಎಡತೊಡೆಯ ಮೇಲೆ ದೇವಿಯನ್ನು ಕೂಡಿಸಿಕೊಂಡು ಕುಳಿತಿದ್ದಾನೆ. ಸೊಂಡಿಲಲ್ಲಿ ರತ್ನ ಕುಂಭವನ್ನು ಹಿಡಿದಿದ್ದು, ಕರಂಡ ಮುಕುಟವನ್ನು ಹೊಂದಿದ್ದು, ಚೌಕಾಕಾರದ ಪೀಠದ ಮೇಲೆ ಕುಳಿತಿದ್ದಾನೆ.

**ಬಾಲ ಗಣಪತಿ :** ಈ ಗಣಪತಿಯು ಬಾಲಕನ ರೂಪದಲ್ಲಿದ್ದು ನಾಲ್ಕು ಭುಜಗಳನ್ನು ಹೊಂದಿದ್ದು ತೆನೆ, ಕಬ್ಬಿಣ ಜಲ್ಲೆ, ಅಭಯಹಸ್ತ ಮತ್ತು ಮೋದಕವನ್ನು ಹಿಡಿದಿದ್ದು ವಿಶೇಷವಾಗಿದೆ.

**ನಾಟ್ಯ ಗಣಪತಿ :** ಇಲ್ಲಿ ಗಣೇಶನು ನಾಟ್ಯವಾಡುತ್ತಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಅಂಕುಶ, ಪಾಶಗಳನ್ನು ಹಿಡಿದಿದ್ದು ನಾಟ್ಯಕ್ಕೆ ತಕ್ಕಂತೆ ಹಸ್ತಗಳನ್ನು ತೋರಿಸಿರುವುದು ಕಂಡುಬರುತ್ತದೆ. ಇಲ್ಲಿ ಗಣೇಶನು ಕರಂಡ ಮುಕುಟವನ್ನು ಹೊಂದಿದ್ದಾನೆ.

**ಹೇರಂಬ ಗಣಪತಿ :** ನಾಲ್ಕು ಮುಖಗಳನ್ನು ಹೊಂದಿದ್ದು, ಹತ್ತು ಕೈಗಳಿವೆ. ಇಲ್ಲಿ ಗಣೇಶನು ಸಿಂಹದ ಮೇಲೆ ಸವಾರಿ ಮಾಡುತ್ತಿದ್ದು ವಿಶೇಷವಾಗಿದೆ. ಇಲ್ಲಿ ಗಣೇಶನ ಕೈಯಲ್ಲಿ ಅಂಕುಶ, ಪಾಶ, ಖಡ್ಗ, ತ್ರಿಶೂಲ, ದಂತ, ಕತ್ತಿ, ಕಮಲದ ಹೂ, ಅಭಯಹಸ್ತ ಮತ್ತು ವರದ ಹಸ್ತವನ್ನು ಹೊಂದಿದ್ದಾನೆ.

---

೫. ಈ ಭಿತ್ತಿಚಿತ್ರವು  ೨೦೦೫ರಲ್ಲಿ ಟೈಲ್ಸ್ ಮೇಲೆ ರಚನೆಯಾಗಿದ್ದು, ರಾಯಚೂರಿನ ಶ್ರೀ ಪಾಂಡುರಂಗ ವಿಠ್ಠಲ ರುಕ್ಮೀಣಿ ದೇವಸ್ಥಾನದ ಬಾಗಿಲದ ಒಳಗೋಡೆಯ ಮೇಲಿದೆ.

**ವೀರ ಗಣಪತಿ :** ಈ ಗಣಪತಿಯು ಸಮಭಂಗಿಯಲ್ಲಿ ನಿಂತಿದ್ದು, ಹದಿನಾಲ್ಕು ಕೈಗಳನ್ನು ಹೊಂದಿದ್ದಾನೆ. ಕೈಗಳಲ್ಲಿ ಖಡ್ಗ, ಕುಂಭ, ಅಂಕುಶ, ಬಾಣ, ಚಕ್ರ, ಭತ್ತದ ತೆನೆ, ಶಕ್ತಿ, ಬಿಲ್ಲು, ಶರ್ಪ, ತ್ರಿಶೂಲ, ಮೃಗ ಹೀಗೆ ಆಯುಧಗಳನ್ನು ಹಿಡಿದಿದ್ದು ವಿಶೇಷವಾಗಿದೆ. ಇದರಲ್ಲಿ ನಡುವೆ ದೊಡ್ಡ ಗಣೇಶನ ಚಿತ್ರವಿದೆ. ಇಲ್ಲಿ ಗಣಪತಿಯು ಸಿಂಹಾಸನದ ಮೇಲೆ ಕುಳಿತಿದ್ದು ನಾಲ್ಕು ಕೈಗಳನ್ನು ಹೊಂದಿದ್ದಾನೆ ಮೇಲಿನ ಬಲಗೈಯಲ್ಲಿ ಪರಶು (ಎಡ), ಕಮಲ ಮತ್ತು ಪಾಶ, ಕೆಳಗಿನ ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಮೋದಕ ಬುಟ್ಟಿ, ಸೊಂಡಿಲಲ್ಲಿ ರತ್ನಕುಂಭ, ಕರಂಡ ಮಕುಟವನ್ನು ಹೊಂದಿದ್ದಾನೆ. ಇಲ್ಲಿ ಗಣೇಶನು ಏಕದಂತನಾಗಿದ್ದು, ಶ್ರೀಮಂತಿಕೆಯ ಸಂಕೇತವನ್ನು ಸೂಚಿಸುವಂತಿದೆ. ಈ ಕಲಾಕೃತಿಯಲ್ಲಿ ಮೋದಕ ತಿನ್ನುತ್ತಿರುವ ಇಲಿಯನ್ನು ರಚಿಸಲಾಗಿದೆ. ಈ ಕಲಾಕೃತಿಯಲ್ಲಿ ಹಸಿರು, ಗುಲಾಬಿ, ಕೇಸರಿ, ಕಪ್ಪು, ಚಿನ್ನದ ಬಣ್ಣ, ಹಳದಿ, ನೀಲಿ ಮತ್ತು ಬಿಳಿ ಮಿಶ್ರಿತ ಬಣ್ಣಗಳನ್ನು ಬಳಸಲಾಗಿದೆ. ಇಲ್ಲಿ ರಚನೆಯಾದ ಚಿತ್ರಗಳು ಸೌಂದರ್ಯದ ಹಿನ್ನೆಲೆಯಲ್ಲಿ ಮುಗ್ದಲ ಪುರಾಣೋಕ್ತ ಗಣಪತಿಗಳಾಗಿವೆ.

*********



೦೧. ಸಿಂಹಾಸನದ ಮೇಲೆ ಕುಳಿತ ಗಣೇಶ



೦೨. ತಂದೆ ತಾಯಿಯರೊಂದಿಗೆ ಗಣೇಶ



೦೩. ಭಿತ್ತಿಮೇಲೆ ರಚನೆಯಾದ ಗಣೇಶ ಚಿತ್ರಗಳು

## ಅಧ್ಯಾಯ – ಆರು

# ಮರ, ಕಟ್ಟಿಗೆ ಮಾಧ್ಯಮದಲ್ಲಿ ಗಣೇಶನ ಶಿಲ್ಪ ಮತ್ತು ಇತರ ಮಾಧ್ಯಮದ ಶಿಲ್ಪಗಳು

ಮರ ಕೆತ್ತನೆಯ ಶಿಲ್ಪವು ಮಾನವನ ಅಗತ್ಯವಾಗಿ ಉಳಿಯದೇ ಅವನ ಅಭಿರುಚಿಗೆ, ಕಲಾತ್ಮಕತೆಗೆ ಒಂದು ಸಾಧನವಾಗಿ ರೂಪಿತವಾಯಿತು. ಮರದಿಂದ ರಥ, ನೌಕೆ, ಮೂರ್ತಿ, ಶಿಲ್ಪ ಹಾಗೂ ಕಟ್ಟಡಗಳನ್ನು ನಿರ್ಮಿಸಲಾಗುತ್ತದೆ. ಕಟ್ಟಿಗೆಯ ಶಿಲ್ಪದ ಉಗಮವನ್ನು ಆದಿ ಮಾನವನ ಕಾಲದಿಂದಲೂ ಗುರುತಿಸಬಹುದು. ಮಾನವನ ಆರ್ಥಿಕ ಚಟುವಟಿಕೆಗಳ ಬೆಳವಣಿಗೆಯೊಂದಿಗೆ ಕೃಷಿ ಉತ್ಪನ್ನದೊಂದಿಗೆ ಕಟ್ಟಿಗೆ ಶಿಲ್ಪದ ಬೆಳವಣಿಗೆ ಪ್ರಾರಂಭವಾಗುತ್ತದೆ.

ಪ್ರಾರಂಭದ ಹಂತದಲ್ಲಿ ಗುಹೆಗಳಲ್ಲಿ ವಾಸಿಸುತ್ತಿದ್ದ ಮಾನವನು ತಾನು ಕೆಲಸ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ವಸತಿ ಇದ್ದರೆ, ಹೆಚ್ಚು ಉಪಯುಕ್ತ ಎಂದು ಮನಗಂಡು ನೈಸರ್ಗಿಕ ಸಂಪನ್ಮೂಲಗಳ ಸಹಾಯದಿಂದ ಗುಹೆಗಳನ್ನು ಅನುಕರಿಸಿ ವಾಸಕ್ಕೆ ವಸತಿಯನ್ನು ನಿರ್ಮಿಸಿಕೊಂಡ. ಕ್ರಮೇಣ ತನ್ನ ಅಗತ್ಯತೆಗಳಿಗೆ ಅನುಗುಣವಾಗಿ ವಿಶಾಲವಾದ ಅಲಂಕೃತ ದೇವಾಲಯ, ಅರಮನೆ, ಮನೆ ಮುಂತಾದವುಗಳನ್ನು ನಿರ್ಮಿಸಿಕೊಂಡನು. ಆರಂಭದಲ್ಲಿ ಇಂತಹ ಕಟ್ಟಡಗಳು ಮರದಿಂದ ನಿರ್ಮಿತವಾಗಿದ್ದವು ಎನ್ನುವುದರಲ್ಲಿ ಸಂಶಯವಿಲ್ಲ.

ಭಾರತದಲ್ಲಿಯೂ ಪುರಾತತ್ವ ಸಂಶೋಧನೆಗಳ ಪ್ರದೇಶಗಳಲ್ಲಿ ಕಟ್ಟಡ ನಿರ್ಮಾಣಕ್ಕೆ ಮರವನ್ನು ಉಪಯೋಗಿಸಿದ ಮಾಹಿತಿ ನವ ಶಿಲಾಯುಗದ ಕಾಲದಿಂದ ಅಂದರೆ ಸುಮಾರು ೩೦೦೦ ವರ್ಷಗಳ ಹಿಂದೆಯೇ ಪ್ರಪಂಚದ ಅನೇಕ ಕಡೆಗಳಲ್ಲಿ ಬಳಸಿಕೊಂಡಿರುವುದು ಪ್ರಾಕ್ಚಾರಿತ್ರಿಕ ಸಂಶೋಧನೆಯಿಂದ ತಿಳಿದುಬರುತ್ತದೆ. ಅಸ್ಸೀರಿಯದ ಎಬೈರನ್ ಎಂಬಲ್ಲಿ ಜೊಂಡಿನ ಗುಡಿಸಲೊಂದು ದೊರೆತಿದೆ. ಜಗತ್ತಿನಲ್ಲಿ (ಕ್ರಿ.ಪೂ. ೩೦೦೦) ಅತ್ಯಂತ ಪ್ರಾಚೀನವಾದ ಮಾನವ ನಿರ್ಮಿತ ವಸತಿ ನಿವೇಶನ ಎಂದು ಹೇಳಲಾಗಿದೆ.

ಭಾರತದಲ್ಲಿಯೂ ಪುರಾತತ್ವ ಸಂಶೋಧನೆಗಳ ಪ್ರದೇಶಗಳಲ್ಲಿ ಕಟ್ಟಡಗಳ ನಿರ್ಮಾಣಕ್ಕೆ ಮರವನ್ನು ಉಪಯೋಗಿಸಿದ ಮಾಹಿತಿ ಲಭ್ಯವಿದೆ. ಪುರಾತತ್ವಶಾಸ್ತ್ರದ ಜೊತೆಯಲ್ಲಿಯೇ ಪ್ರಾಚೀನ ಸಾಹಿತ್ಯ ಗ್ರಂಥಗಳಾದ ವೇದ, ಪುರಾಣ, ಆಗಮಗಳಿಂದ ಮತ್ತು ರಾಮಾಯಣ, ಮಹಾಭಾರತಗಳಿಂದ, ಐತಿಹಾಸಿಕ ಕಾದಂಬರಿಗಳಿಂದ, ವಾಸ್ತುಶಿಲ್ಪದ ಗ್ರಂಥಗಳಾದ ಮಾನಸಾರ ಮಯಮತ ಮತ್ತು ಭಾರತಕ್ಕೆ ಭೇಟಿ ನೀಡಿದ ವಿದೇಶಿ ಬರಹಗಾರರ ಉಲ್ಲೇಖಗಳಿಂದ ಭಾರತದ ಅನೇಕ ಭಾಗಗಳಲ್ಲಿ ಮರವನ್ನು ಕಟ್ಟಡಗಳ ನಿರ್ಮಾಣಕ್ಕೆ ಬಳಸುತ್ತಿದ್ದರು ಎಂದು ತಿಳಿದುಬರುವುದು. ಹರಪ್ಪ ಸಂಸ್ಕೃತಿಯಲ್ಲಿ ಮರದ ಬಳಕೆ ಕಂಡುಬಂದರು ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಆದರೆ ಗ್ರಾಮೀಣ ಜೀವನ ಮಾಡುತ್ತಿದ್ದ ಆರ್ಯರು ಕಟ್ಟಡ ರಕ್ಷಣೆಗಾಗಿ ಹಾಕಿಕೊಂಡ ಬೇಲಿ. ಇವುಗಳು ಸಂಪೂರ್ಣ ಮರದಿಂದ ರಚಿತವಾದ ಬಗ್ಗೆ ವೇದಗಳಲ್ಲಿ ಮತ್ತು ಮತ್ತಿತರ ದಾಖಲೆಗಳಲ್ಲಿ ಮಾಹಿತಿ ದೊರೆಯುತ್ತದೆ.

ದಕ್ಷಿಣ ಭಾರತದಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ಕಲ್ಲಿನ ಕಟ್ಟಡಗಳು ನಿರ್ಮಿತವಾಗಿದ್ದರೂ, ಪಲ್ಲವರ ರಾಜ ಮಹೇಂದ್ರವರ್ಮನ ಶಾಸನದಲ್ಲಿ ಮಹೇಂದ್ರವರ್ಮನೆ ಮರ, ಇಟ್ಟಿಗೆ ಬದಲಾಗಿ ಕಲ್ಲನ್ನು ಬಳಸಿದ ಎಂದು ಹೇಳುತ್ತದೆ. ಮರದ ಕಟ್ಟಡಗಳ ಕುರಿತು ಕೆಲವು ಚಾರಿತ್ರಿಕ ದಾಖಲೆಗಳು ಉಳಿದು ಬಂದಿದ್ದರೂ ಅದರ ಸ್ವಾಭಾವಿಕ ಗುಣದಿಂದಾಗಿ ಅಂತಹ ಕಟ್ಟಡಗಳು ದೀರ್ಘಕಾಲ ಉಳಿದು ಬರಲು ಸಾಧ್ಯವಾಗಲಿಲ್ಲ. ಇಂದು ಕೆಲವೇ ಕೆಲವು ಪ್ರದೇಶಗಳಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿವೆ.[೧] ಜಮ್ಮು ಕಾಶ್ಮಿರ, ರಾಜಸ್ಥಾನ, ಗುಜರಾತ, ಕರ್ನಾಟಕ, ಕೇರಳ ಹೀಗೆ ಅನೇಕ ಕಡೆಗಳಲ್ಲಿ ಉಳಿದುಕೊಂಡಿವೆ. ಆದರೆ ಉತ್ತರ ಕರ್ನಾಟಕದಲ್ಲಿ ರಾಯಚೂರಿನ ಕಾಜಿನ ಗೌಡರ ಮನೆ ಇದಕ್ಕೆ ಮುಖ್ಯ ಉದಾಹರಣೆಯಾಗಿದೆ. ಈ ಸಮಕಾಲಿನ ಸಂದರ್ಭದಲ್ಲಿ ಕಲ್ಲಿನಿಂದ ಮನೆಯನ್ನು, ದೇವಾಲಯವನ್ನು ಕಟ್ಟಿದರೂ ಬಾಗಿಲು ಮತ್ತು ಕಿಟಕಿಗಳನ್ನು ಮರದಿಂದ ರಚಿಸುತ್ತಾರೆ. ಮತ್ತು ದೇವಾಲಯದ ರಥಗಳನ್ನು ಸಹ ಮರದಿಂದ ಕೆತ್ತಿರುವುದುಂಟು. ಬಾಗಿಲು ಮತ್ತು ರಥಗಳನ್ನು ಅಲಂಕರಿಸುವ ಸಂದರ್ಭದಲ್ಲಿ ಹಲವಾರು ದೇವಾನು ದೇವತೆಗಳ ಮೂರ್ತಿಶಿಲ್ಪಗಳನ್ನು ರಚಿಸುತ್ತಾರೆ. ಇಲ್ಲಿ ಕೀರ್ತಿಮುಖ, ಗಜಲಕ್ಷ್ಮೀ, ಆಂಜನೇಯ, ಪ್ರಾಣಿ–ಪಕ್ಷಿಗಳು, ಲಕ್ಷ್ಮೀ, ಶಿವ, ಗಣಪತಿ ಹೀಗೆ ಹಲವಾರು ದೇವಾನು ದೇವತೆಗಳ ಶಿಲ್ಪಗಳನ್ನು ರಚಿಸುವುದನ್ನು ನೋಡುತ್ತೇವೆ. ಆದರೆ ಇಂತಹ ಶಿಲ್ಪಗಳಲ್ಲಿ ಹೆಚ್ಚಾಗಿ ಗಣೇಶನ ಶಿಲ್ಪಗಳನ್ನು ರಚಿಸಿರುವುದು ಕಂಡುಬರುತ್ತದೆ. ಇದರ ಜೊತೆಗೆ ಇನ್ನಿತರ ಮಾಧ್ಯಮಗಳಾದ ಕಂಚು, ಪ್ಲಾಸ್ಟರ್ ಆಫ್ ಪ್ಯಾರಿಸ್, ಸಿಮೆಂಟ್, ಕಬ್ಬಿಣದ ಬಿಡಿಭಾಗಗಳು, ಚಿನ್ನ, ಬೆಳ್ಳಿ ಹೀಗೆ ಹಲವಾರು ಮಾಧ್ಯಮಗಳಲ್ಲಿ ರಚನೆಯಾಗುತ್ತಿರುವುದು ಕಂಡುಬರುತ್ತದೆ. ಇನ್ನು ಕೆಲವು ಕಲೆಗಳಾದ ಕಿನ್ನಾಳ, ಕಲಘಟಗಿ, ಗಂಜೀಪಾ ಹೀಗೆ ಹಲವಾರು ಕಲೆಗಳಲ್ಲಿ ಗಣೇಶನ ಚಿತ್ರ–ಶಿಲ್ಪಗಳು ರಚನೆಯಾಗುತ್ತಿರುವುದು ವಿಶೇಷವಾಗಿದೆ. ಈ ಆಧುನಿಕತೆಯಲ್ಲಿ ಗಣೇಶಣೂ ಕಲಾವಿದನ ಸೃಜನಶೀಲತೆಯನ್ನು ಮೀರಿ ರಚನೆಗೊಳ್ಳುತ್ತಿದ್ದಾನೆ. ಹೀಗೆ ಗಣೇಶನ ಶಿಲ್ಪಗಳನ್ನು ರಚಿಸುವಲ್ಲಿ ಆಧುನಿಕತೆಯನ್ನು ಕಂಡಿತು ಎಂದು ಹೇಳಬಹುದಾಗಿದೆ.

---

೧. ಕರೀಗೌಡ ಬೀಚನಹಳ್ಳಿ, ಕರಕುಶಲ ಕಲೆಗಳು, (ಸಂ), ವೀಣಾ ಮಹಾಂತೇಶ ಅವರ ಲೇಖನ, ಪು–೧೬೬,೧೬೭,೧೬೮

## ೧. ಶಯನ ಗಣಪತಿ ಶಿಲ್ಪ

ಈ ಶಿಲ್ಪವು ೧ ೧/೨X೩ ೧/೨ ಅಳತೆಯಲ್ಲಿದ್ದು, ಇದನ್ನು ಮರದಿಂದ ನಿರ್ಮಿಸಲಾಗಿದೆ.[೨] ಆಸೀನ ಗಣಪತಿಯ ಶಿಲ್ಪವು ವಿಶೇಷವಾಗಿದೆ. ಎರಡು ಕೈಗಳನ್ನು ಹೊಂದಿದ್ದು, ಒಂದು ಕೈಯನ್ನು ತಲೆಯ ಕೆಳಗೆ ಇಟ್ಟುಕೊಂಡು, ಇನ್ನೊಂದು ಕೈ ತೊಡೆಯ ಮೇಲಿಂದ, ಒಂದು ಕಾಲು ಅರ್ಧ ಮಡಚಿದೆ. ಸುಂದರವಾದ ಈ ಶಿಲ್ಪವು ಆಭರಣಗಳನ್ನು ಧರಿಸಿದೆ. ಕಠಹಾರ, ಯಜ್ಞೋಪವಿತ, ಉದರಕ್ಕೆ ಸುಂದರವಾದ ಚತರಸ್ರ ಆಕಾರದ ಹಲಗೆಯ ಮೇಲೆ ಶಯನವಾಗಿದೆ. ಈ ಹಲಗೆಯನ್ನು ಅಲಂಕರಣಗೊಳಿಸಲಾಗಿದೆ. ಇಲ್ಲಿ ಗಣೇಶನು ಏಕದಂತನಾಗಿದ್ದು ಕರಂಡ ಮುಕುಟವನ್ನು ಹೊಂದಿದೆ. ಈ ಶಿಲ್ಪವನ್ನು ಮೈಸೂರಿನಲ್ಲಿ ಮಾರಾಟದ ವೇಳೆಯಲ್ಲಿ ತಂದಿರುವುದು. ಈ ಶಿಲ್ಪವು ರಾಯಚೂರಿನ ಕುಬೇರ ಹೊಟೇಲ್‌ನಲ್ಲಿ ಸಂಗ್ರಹಿಸಲಾಗಿದೆ.

## ೨. ನಿಂತ ಗಣೇಶ

ಈ ಶಿಲ್ಪವು ೩X೧ ೧/೨ ಅಳತೆಯಲ್ಲಿದ್ದು, ಇದನ್ನು ಬೆಂಗಳೂರಿನಲ್ಲಿ ಶಿಲ್ಪ ಪ್ರದರ್ಶನವೊಂದರಲ್ಲಿ ಕೊಂಡು ತಂದಿದೆ. ಈ ಶಿಲ್ಪವನ್ನು ಮರದಲ್ಲಿ ರಚನೆ ಮಾಡಲಾಗಿದ್ದು, ಸಮಭಂಗಿಯಲ್ಲಿ ನಿಂತಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆ, ಹಾರಗಳು, ಸರಗಳು, ನಾಗಬಂಧವನ್ನು ಹೊಂದಿದೆ. ಸುಂದರವಾದ ಅಲಂಕರಣೆಯ ವಸ್ತ್ರವನ್ನು ಧರಿಸಲಾಗಿದೆ. ಸ್ಪಷ್ಟವಾದ ಆಭರಣಗಳು ಇವೆ. ಸೊಂಡಿಲು ಮೋದಕವನ್ನು ಸ್ವೀಕರಿಸುತ್ತಿದ್ದಂತೆ ಕಂಡುಬರುತ್ತದೆ. ಕಿರೀಟದಲ್ಲಿ ಒಂದು ವಿಶೇಷತೆಯನ್ನು ಕಾಣುತ್ತೇವೆ. ಈ ಶಿಲ್ಪವು ಗಣಗಳ ರೂಪದಲ್ಲಿದ್ದು, ವೃತ್ತಾಕಾರದ ಪೀಠದ ಮೇಲೆ ನಿಂತಿದೆ. ಇಲಿಯನ್ನು ಗಣೇಶನ ಕಾಲಿಗೆ ಅಪ್ಪಿಕೊಂಡಂತೆ ರಚಿಸಲಾಗಿದೆ. ಈ ಶಿಲ್ಪವು ರಾಯಚೂರಿನ ಕುಬೇರ ಹೊಟೇಲ್‌ನ ಸಂಗ್ರಹದಲ್ಲಿದೆ.

## ೩. ಬಾಗಿಲ ಮೇಲೆ ರಚನೆಯಾದ ಗಣೇಶನ ಶಿಲ್ಪ

ಈ ಗಣೇಶನ ಶಿಲ್ಪವು ರಾಯಚೂರಿನ ಅಮರೇಶ ಬಾಳಪ್ಪ ಅವರ ಮನೆಯ ಬಾಗಿಲ ಮೇಲೆ ಉಬ್ಬು ಶಿಲ್ಪವಾಗಿ ರಚನೆಯಾಗಿದ್ದು,[೪] ಪೀಠದ ಮೇಲೆ ಅರ್ಧಾಸನದಲ್ಲಿ ಕುಳಿತಿದ್ದು, ಕರಂಡ ಮುಕುಟವನ್ನು ಹೊಂದಿದೆ. ನಾಲ್ಕು ಭುಜಗಳಿದ್ದು ಪಾಶಾಂಕುಶ, ಅಭಯ ಹಸ್ತ ಮತ್ತು ಮೋದಕ ಬುಟ್ಟಿಯನ್ನು ಹಿಡಿದುಕೊಂಡಿದ್ದಾನೆ. ಸೊಂಡಿಲಲ್ಲಿ ರತ್ನಕುಂಭವನ್ನು ಹಿಡಿದಿದ್ದಾನೆ. ಕೊರಳಲ್ಲಿ ಹಾರಗಳು, ಕೈಗಡಗಗಳು, ಕಾಲಗಡಗಗಳು ಸುಂದರವಾಗಿ ಮೂಡಿಬಂದಿವೆ. ಅವನ ಪಾದದ ಮುಂದೆ ತನ್ನ ವಾಹನವಾದ ಇಲಿಯನ್ನು ಚಿಕ್ಕದಾಗಿ ರಚಿಸಲಾಗಿದೆ. ಏಕದಂತನಾಗಿದ್ದು ಸುಖ-ಸಂತೋಷದ ಸಂಕೇತಗಳಾಗಿವೆ.

---

೨. ಈ ಶಿಲ್ಪವು ರಾಯಚೂರಿನ ಕುಬೇರ ಹೊಟೇಲ್‌ನ ಸಂಗ್ರಹದಲ್ಲಿದೆ.

೩. ಈ ಶಿಲ್ಪವು ರಾಯಚೂರಿನ ಕುಬೇರ ಹೊಟೇಲ್‌ನ ಸಂಗ್ರಹದಲ್ಲಿದೆ.

೪. ಈ ಶಿಲ್ಪವು ರಾಯಚೂರಿನ ಅಮರೇಶ ಬಾಳಪ್ಪ ಅವರ ಸಂಗ್ರಹದಲ್ಲಿದೆ.

**೪. ಗಣೇಶ ಶಿಲ್ಪ**

ಈ ಶಿಲ್ಪವು ಶ್ರೀ ಹಂಪಿ ವಿರೂಪಾಕ್ಷ ದೇವರ ರಥದ ಮೇಲಿನ ಶಿಲ್ಪ ಇದಾಗಿದೆ.[೫] ಬಹಳ ಆಭರಣಗಳಿಂದ ಕೂಡಿದ್ದು, ಕರಂಡ ಮಕುಟ್ಟವನ್ನು ಹೊಂದಿದೆ. ಈ ಶಿಲ್ಪದಲ್ಲಿ ಗಣೇಶನು ಚೌಕಾಕಾರದ ಪೀಠದ ಮೇಲೆ ಕುಳಿತಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ಅಂಕುಶ, ಪಾಶ, ದಂತ, ಬೀಜಪೂರ ಹೀಗೆ ಆಯುಧಗಳನ್ನು ಹಿಡಿದಿದ್ದು, ಉದರ ಬಂಧವನ್ನು ಹೊಂದಿದೆ. ದೊಡ್ಡದಾದ ಹಾರ, ಗಣಪತಿಯ ಸೊಂಡಿಲು, ಬೀಜಪೂರವನ್ನು ತಲುಪಿದೆ ಇದರಲ್ಲಿ ಕಾಲಗಡಗ, ಕೈಗಡಗಗಳು ಸುಂದರವಾದ ಕೇಶವಿನ್ಯಾಸ ಹೀಗೆ ಹಲವಾರು ರೀತಿಯಲ್ಲಿ ಅಲಂಕಾರಿಕವಾಗಿ ರಚನೆಯಾಗಿರುವುದು ಕಂಡುಬರುತ್ತದೆ. ಅವನ ಕಿರೀಟ ಹಿಂದೆ ಸುಂದರವಾದ ಕೀರ್ತಿ ಮುಖವನ್ನು ಕೆತ್ತಲಾಗಿದೆ. ಇದು ಕಟ್ಟಿಗೆಯಲ್ಲಿ ರಚನೆಯಾಗಿರುವುದಲ್ಲದೇ ಪುರಾಣೋಕ್ತ ರಚನೆಯಾಗಿದೆ. ಏಕದಂತನಾಗಿ ಮೂಷಿಕ ವಾಹನನಾಗಿದ್ದಾನೆ. ಪೀಠದ ಕೆಳಗೆ ಇಲಿಯನ್ನು ಚಿಕ್ಕದಾಗಿ ರಚಿಸಲಾಗಿದೆ.

**೫. ಗಣೇಶ ಶಿಲ್ಪ**

ಈ ಶಿಲ್ಪವು ಕುಳಿತ ಭಂಗಿಯಲ್ಲಿದ್ದು, ಹಂಪಿಯ ವಿರೂಪಾಕ್ಷೇಶ್ವರ ರಥದ ಮೇಲೆ ರಚನೆಯಾಗಿರುವ ಶಿಲ್ಪ.[೬] ಈ ಶಿಲ್ಪವು ಏಕದಂತನಾಗಿದ್ದು ಕಟ್ಟಿಗೆಯಲ್ಲಿ ಕೆತ್ತನೆಯಾಗಿದೆ. ನಾಲ್ಕು ಭುಜಗಳನ್ನು ಹೊಂದಿ ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಚಕ್ರ, ಕೆಳಗಿನ ಬಲಗೈ ಅಭಯ ಹಸ್ತ, ಎಡಗೈ ವರದ ಹಸ್ತವಿದ್ದು ಉದರ ಬಂಧವನ್ನು ಹೊಂದಿದೆ. ಅಲಂಕಾರಗಳು, ಕೈಗಡಗ, ಕಾಲಗಡಗಗಳು ಸುಂದರವಾದ ನಾಗರಪಣಿಯನ್ನು ಹೊಂದಿದ್ದು ವಿಶೇಷವಾಗಿದೆ. ಇಲ್ಲಿ ಗಣೇಶನು ಅಭಯ ಮತ್ತು ವರದ ಹಸ್ತವನ್ನು ಹೊಂದಿದ್ದರಿಂದ ಬೇಡಿದ ವರ ಕೊಡುವುದನ್ನು ಸೂಚಿಸುತ್ತದೆ. ಇದು ಸೌಂದರ್ಯದ ಹಿನ್ನೆಲೆಯಲ್ಲಿ ರಚನೆಯಾಗಿದೆ.

**೬. ಕುಳಿತ ಗಣೇಶ**

ಈ ಶಿಲ್ಪವು ಬಾಗಿಲ ಪಟ್ಟಿಕೆಯ ಮೇಲೆ ರಚನೆಯಾಗಿದ್ದು, ಕುಳಿತ ಭಂಗಿಯಲ್ಲಿದೆ.[೭] ನಾಲ್ಕು ಕೈಗಳನ್ನು ಹೊಂದಿದೆ. ಇದು ಚೌಕಾಕಾರದ ಪೀಠದ ಮೇಲೆ ಕುಳಿತಿದ್ದು, ಕರಂಡ ಮಕುಟವನ್ನು ಹೊಂದಿದೆ. ಎಡಗೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದಿದ್ದು, ಅವನ ಸೊಂಡಿಲು ಮೋದಕವನ್ನು ತೆಗೆಯುವ ಹಾಗಿದೆ. ಉದರ ಬಂಧವನ್ನು ಹೊಂದಿದೆ. ಇಲ್ಲಿ ಗಣೇಶನು ಏಕದಂತನಾಗಿದ್ದು, ಅವನ ಪೀಠದ ಕೆಳಗೆ ಮೂಷಿಕನು ಮೋದಕವನ್ನು ಸೇವಿಸುತ್ತಿರುವುದನ್ನು ರಚನೆ ಮಾಡಲಾಗಿದೆ. ಇದು ವಿದ್ಯಾದೇವನಾಗಿ ರಚನೆಯಾಗಿರುವುದು ವಿಶೇಷವಾಗಿದೆ. ಈ ಶಿಲ್ಪವು ಕನ್ನಡ ವಿಶ್ವವಿದ್ಯಾಲಯದ ಸಿರಿಗನ್ನಡ ಕಟ್ಟಡದ ಬಾಗಿಲ ಪಟ್ಟಿಕೆಯ ಮೇಲೆ ಈ ಗಣಗಳ ರೂಪದಲ್ಲಿ ರಚನೆಯಾಗಿದೆ.

---

೫. ಈ ಶಿಲ್ಪವು ಸದ್ಯ ಹಂಪಿ ವಿರೂಪಾಕ್ಷ ದೇವರ ರಥದ ಮೇಲಿದೆ.

೬. -ಅದೇ-

೭. ಈ ಶಿಲ್ಪವು ಕನ್ನಡ ವಿಶ್ವವಿದ್ಯಾಲಯದ ಸಿರಿಗನ್ನಡ ಕಟ್ಟಡದ ಬಾಗಿಲ ಪಟ್ಟಿಕೆಯ ಮೇಲೆ

## ೭. ಹಂಪಿಯ ವಿರೂಪಾಕ್ಷೇಶ್ವರ ದೇವಸ್ಥಾನದ ರಥದ ಮೇಲಿನ ಶಿಲ್ಪಗಳು

೧. ಈ ಕೋಷ್ಟಕದಲ್ಲಿ ಮೂರು ಗಣಪತಿಯ ಶಿಲ್ಪಗಳಿದ್ದು, ಊರ್ಧ್ವ ಗಣಪತಿ, ಕ್ಷಿಪ್ರ ಪ್ರಸಾದ ಗಣಪತಿ, ವರ ಗಣಪತಿ ಎಂದು ಮೂರು ಶಿಲ್ಪಗಳನ್ನು ಕೆತ್ತಲಾಗಿದೆ. ಊರ್ಧ್ವ ಗಣಪತಿಯು ಎಂಟು ಕೈಗಳನ್ನು ಹೊಂದಿದ್ದು, ದೇವಿಯೊಬ್ಬಳನ್ನು ಎಡ ತೊಡೆಯ ಮೇಲೆ ಕೂಡಿಸಿಕೊಂಡು ಒಂದು ಕೈಯಿಂದ ಆಕೆಯ ನಡುವನ್ನು ಆಲಂಗಿಸಿಕೊಂಡು ಸುಖಾಸೀನನಾಗಿ ಕುಳಿತಿರುವ ರೂಪ. ಕೈಗಳಲ್ಲಿ ದಂತ, ಕಮಲ, ಫಲ್ಹಾರ, ಭತ್ತದ ತೆನೆ, ಕಬ್ಬಿನ ಜಲ್ಲೆ, ಗದೆ, ಬಾಣ, ಉಳಿದ ಕೈ ಮೇಲೆ ಹೇಳಿದಂತೆ ದೇವಿಯನ್ನು ಆಲಂಗಿಸಿದೆ. ಎರಡನೆಯ ಶಿಲ್ಪದಲ್ಲಿ ಗಣೇಶನು ಕುಳಿತ ಭಂಗಿಯಲ್ಲಿದ್ದು ಪುಷ್ಪಲತೆ, ಅಂಕುಶ, ಪಾಶ, ಕಮಲ ಹೂ, ದಾಳಿಂಬೆ ಹಣ್ಣು (ಬೀಜಪೂರ), ದಂತ ಹೀಗೆ ಆಯುಧಗಳನ್ನು ಹಿಡಿದಿದ್ದು ವೃತ್ತಾಕಾರದ ಪೀಠದ ಮೇಲೆ ಆಸೀನನಾಗಿದ್ದಾನೆ. ಮೂರನೇ ಶಿಲ್ಪವು ವರ ಗಣಪತಿ. ನಾಲ್ಕು ಕೈಗಳನ್ನು ಹೊಂದಿದ್ದು ಅಂಕುಶ, ಪಾಶ, ದೇವಿಯ ಕೈಯಲ್ಲಿ ಕೆಂದಾವರೆಯ ಹೂ, ಧ್ವಜವನ್ನು ಇರಿಸಿಕೊಂಡಿದ್ದಾಳೆ. ಗಣಪತಿಯ ಸೊಂಡಿಲಲ್ಲಿ ರತ್ನಗಳು ತುಂಬಿದ ಕೊಡ, ದೇವಿಯನ್ನು ಆಲಂಗಿಸುತ್ತ ಸುಖಾಸೀನನಾಗಿದ್ದಾನೆ. ಈ ಮೂರು ಗಣಪತಿಗಳು ಮುಗ್ದಲ ಪುರಾಣೋಕ್ತ ರಚನೆಯಾಗಿರುವುದು ಗೋಚರವಾಗುತ್ತದೆ.[೮]

೨. ಈ ಪಟ್ಟಿಕೆಯಲ್ಲಿ ಮೂರು ಗಣಪತಿಗಳಿದ್ದು, ಸಿಂಹ ಗಣಪತಿ, ತ್ರಿಮುಖ ಗಣಪತಿ, ಯೋಗ ಗಣಪತಿ ಹೀಗೆ ಮೂರು ರೂಪಗಳನ್ನು ಹೊಂದಿದೆ. ಇಲ್ಲಿ ಸಿಂಹ ಗಣಪತಿಯು ಸಿಂಹದ ಮುಖ, ಆನೆಯ ಸೊಂಡಿಲು ಕುಳಿತಿರುವ ರೂಪ ಎಂಟು ಕೈಗಳು, ಮೇಲಿನ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಕಮಲ, ಶೂಲ, ಕುಂಬ ಇನ್ನು ವಿವಿಧ ಆಯುಧಗಳನ್ನು ಹಿಡಿದಂತಿದೆ. ಅಭಯ ಮತ್ತು ವರದ ಹಸ್ತಗಳಿವೆ. ಎರಡನೇ ಶಿಲ್ಪದಲ್ಲಿ ತ್ರಿಮುಖ ಗಣಪನಿದ್ದು ಮೂರು ತಲೆಗಳು, ಆರು ಕೈಗಳನ್ನು ಹೊಂದಿದ್ದಾನೆ. ಮೇಲಿನ ಬಲಗೈಯಲ್ಲಿ ಗದೆ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ರುದ್ರಾಕ್ಷಿ ಮಾಲೆ, ಎಡಗೈಯಲ್ಲಿ ಬೀಜಪೂರ, ವರದ ಹಸ್ತ ಮತ್ತು ಅಭಯ ಹಸ್ತವನ್ನು ಹೊಂದಿದೆ. ಮೂರನೆಯ ಶಿಲ್ಪವು ಯೋಗ ಗಣಪತಿಯ ಶಿಲ್ಪವಾಗಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ಕ್ರಮದಲ್ಲಿ ಕಬ್ಬಿನ ಜಲ್ಲೆ, ಅಕ್ಷಮಾಲೆ, ಪಾಶ, ಯೋಗದಂಡವನ್ನು ಒಳಗೊಂಡಿದೆ. ಮೂರು ಗಣಪತಿಗಳು ಮುಗ್ದಲ ಪುರಾಣೋಕ್ತ ಗಣಪತಿಗಳಾಗಿವೆ.

೩. ಈ ಶಿಲ್ಪದಲ್ಲಿ ಗಣೇಶನು ಕುಳಿತ ಭಂಗಿಯಲ್ಲಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ಮೇಲಿನ ಬಲಗೈಯಲ್ಲಿ ಅಂಕುಶವನ್ನು ಹಿಡಿದಿದ್ದು, ಎಡಗೈಯಲ್ಲಿ ಕಬ್ಬಿನ ಜಲ್ಲೆ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಬೀಜಪೂರ, ಉದರ ಬಂಧವನ್ನು ಹೊಂದಿದೆ. ಗಣೇಶನ ಹಿಂದೆ ಸುಂದರವಾದ ಪ್ರಭಾವಳಿಯನ್ನು ರಚಿಸಲಾಗಿದೆ.

---

೮. ಈ ಎಲ್ಲ ಶಿಲ್ಪಗಳು ಹಂಪಿಯ ವಿರೂಪಾಕ್ಷೇಶ್ವರ ದೇವಸ್ಥಾನದ ರಥದ ಮೇಲಿದೆ.

೪. ಒಂದೇ ಅಂಕಣದಲ್ಲಿ ಮೂರು ಶಿಲ್ಪಗಳಿದ್ದು ಈ ಶಿಲ್ಪಗಳು ಮುಗ್ದಲ ಪುರಾಣೋಕ್ತ ಗಣಪತಿಗಳಾಗಿವೆ. ಮೊದಲನೆಯ ಶಿಲ್ಪವು ಕುಳಿತ ಭಂಗಿಯಲ್ಲಿದ್ದು, ನಾಲ್ಕು ಭುಜಗಳನ್ನು ಹೊಂದಿದೆ. ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಕುಂಡಿಕಾ, ಕೆಳಗಿನ (ಬಲ) ದಂತ, ಎಡ (ಕನ್ನೆ) ಆವರಿಸಿಕೊಂಡಿದೆ. ಈ ಗಣಪತಿಯು ಏಕದಂತನಾಗಿದ್ದಾನೆ. ಎರಡನೆಯ ಶಿಲ್ಪವು ತ್ರಿಮುಖ ಗಣಪತಿಯಾಗಿದ್ದು, ನಾಲ್ಕು ಕೈಗಳನ್ನು ಹೊಂದಿದೆ. ಮೇಲಿನ ಬಲಗೈಯಲ್ಲಿ ಶಕ್ತಿ, ಎಡಗೈಯಲ್ಲಿ ಕುಂಡಿಕಾ, ಕೆಳಗಿನ ಬಲಗೈಯಲ್ಲಿ ಜಪಮಾಲೆ, ಎಡಗೈಯಲ್ಲಿ ಪುಸ್ತಕವನ್ನು ಹಿಡಿದಿದ್ದು, ಜ್ಞಾನವನ್ನು ಸೂಚಿಸುತ್ತದೆ. ಮೂರನೆಯ ಶಿಲ್ಪವು ಉದ್ದಂಡ ಗಣಪತಿಯ ಶಿಲ್ಪವಾಗಿದ್ದು, ಹನ್ನೆರಡು ಭುಜಗಳನ್ನು ಹೊಂದಿದ್ದು ದೇವಿಯನ್ನು ಎಡ ತೊಡೆಯ ಮೇಲೆ ಕೂಡಿಸಿಕೊಂಡು ಪದ್ಮಾಸನದಲ್ಲಿ ಕುಳಿತಿರುವ ರೂಪ ಗದೆ, ದಂತ, ಕಲಶ, ತಾವರೆ ಹೂ, ಮೋದಕ, ಹೂ, ಶಂಖ, ಅಂಕುಶ, ಭತ್ತದ ತೆನೆ, ಪಾಶ, ಚಕ್ರ, ದಾಳಿಂಬೆ ಹಣ್ಣು, ಕಬ್ಬಿನ ಜಲ್ಲೆ, ಸೊಂಡಿಲಲ್ಲಿ ರತ್ನಕುಂಭ ಹಿಡಿದಿದೆ. ದೇವಿಯ ಕೈಯಲ್ಲಿ ತಾವರೆ ಹೂ ಹಿಡಿದುಕೊಂಡಿದ್ದಾಳೆ. ಈ ಶಿಲ್ಪದಲ್ಲಿ ಎಲ್ಲ ಸಂಕೇತಗಳನ್ನು ಬಳಸಿಕೊಂಡು ರಚಿಸಲಾಗಿದೆ.

೫. ಒಂದೇ ಅಂಕಣದಲ್ಲಿ ಮೂರು ಶಿಲ್ಪಗಳಿದ್ದು ರಚನೆಯಲ್ಲಿ ಬೇರೆ ಬೇರೆಯಾಗಿವೆ. ಮೊದಲನೆಯ ಶಿಲ್ಪವು ನಾಲ್ಕು ಭುಜಗಳನ್ನು ಹೊಂದಿದ್ದು, ಒಂದೊಂದು ಕೈಯಲ್ಲಿ ಒಂದೊಂದು ಆಯುಧಗಳನ್ನು ಹಿಡಿದಿದ್ದು ಮುಗ್ದಲ ಪುರಾಣದ ಪ್ರಕಾರ ಬಾಲ ಗಣಪತಿ ಎಂದು ಗುರುತಿಸಲಾಗಿದೆ. ಮಾವಿನ ಹಣ್ಣು, ಮಾವಿನ ಚಿಗುರು, ಕಬ್ಬಿನ ಜಲ್ಲೆ, ಮೋದಕ ಪಾತ್ರೆ ಹಿಡಿದಂತಿದೆ. ಎರಡನೆಯ ಶಿಲ್ಪದಲ್ಲಿ ನಾಲ್ಕು ಕೈಗಳಿದ್ದು ದಂತ, ಪಾಶ, ಅಂಕುಶ, ಮೋದಕ ಪಾತ್ರೆ ಹಿಡಿದಂತಿದೆ. ಆದರೆ ಮೂರನೆಯ ಶಿಲ್ಪದಲ್ಲಿ ಎಂಟು ಭುಜಗಳನ್ನು ಹೊಂದಿದ್ದು, ತರುಣ ಗಣಪತಿ ಎಂದು ಭಾವಿಸಬಹುದು. ಅಂಕುಶ, ಪಾಶ, ಕಬ್ಬಿನ ಜಲ್ಲೆ, ಅಪೂಪ, ಹಲಸಿನ ಹಣ್ಣು ಕೆಲವು ಆಯುಧಗಳನ್ನು ಹಿಡಿದಿರುವಂತೆ ಹಸ್ತಗಳು ಸೂಚಿಸುತ್ತವೆ. ಈ ಶಿಲ್ಪಗಳು ಕುಳಿತಿದ್ದು ಅರ್ಧಾಸನದಲ್ಲಿವೆ. ಇವುಗಳಿಗೆ ಪ್ರಭಾವಳಿಯಿದ್ದು ಸುಂದರವಾಗಿ ರಚಿಸಲಾಗಿದೆ.

೬. ಈ ಶಿಲ್ಪಗಳು ಕಟ್ಟಿಗೆಯಲ್ಲಿ ರಚನೆಯಾಗಿದ್ದು, ಒಂದೇ ಅಂಕಣದಲ್ಲಿ ಮೂರು ಶಿಲ್ಪಗಳಿವೆ. ಎಲ್ಲ ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದು, ಮೊದಲನೆಯ ಶಿಲ್ಪ ನಾಲ್ಕು ಭುಜಗಳನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ ಪಾಶವನ್ನು, ಎಡಗೈಯಲ್ಲಿ ದಂತ, ಮೋದಕ ಪಾತ್ರೆ, ಉದರ ಬಂಧ, ಕೈಗಡಗಗಳು ಹಿಂದೆ ಸುಂದರವಾದ ಪ್ರಭಾವಳಿ, ಎರಡನೆಯ ಶಿಲ್ಪದಲ್ಲಿ ನಾಲ್ಕು ಕೈಗಳಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ, ಎಡ (ಪಾಶ), ಕೆಳಗಿನ ಬಲ (ದಂತ), ಎಡಗೈಯಲ್ಲಿ ಮೋದಕ ಪಾತ್ರೆ ಈ ಶಿಲ್ಪವು ಕುಳಿತ ಭಂಗಿಯಲ್ಲಿದ್ದು, ಕೊರಳಲ್ಲಿ ಆಭರಣಗಳನ್ನು ಹೊಂದಿದೆ. ಅವನ ಪಕ್ಕದಲ್ಲಿ ಅವನ ವಾಹನವಾದ ಮೂಷಿಕನನ್ನು ಕೆತ್ತಲಾಗಿದೆ. ಮೂರನೆಯ ಶಿಲ್ಪದಲ್ಲಿ ನಾಲ್ಕು

ಕೈಗಳಿದ್ದು, ಮೇಲಿನ ಬಲ (ಪಾಶ), ಎಡ (ಪರಶು), ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ ಪಾತ್ರೆಯನ್ನು ರಚಿಸಿದ್ದು, ಮೂರು ಶಿಲ್ಪಗಳು ಸಮ ಪ್ರಮಾಣದಲ್ಲಿದ್ದು ವೃತ್ತಾಕಾರದ ಪೀಠದಲ್ಲಿ ಕುಳಿತಿವೆ. ಈ ಶಿಲ್ಪಗಳನ್ನು ಗಮನಿಸಿದಾಗ ಸೌಂದರ್ಯದ ಸಂಕೇತವನ್ನು ಸೂಚಿಸುತ್ತವೆ.

**೮. ಸಿಂಹಾಸನದಲ್ಲಿ ಕುಳಿತ ಗಣಪತಿ**

ಈ ಗಣಪತಿಯು ಕುಳಿತ ಭಂಗಿಯಲ್ಲಿದ್ದು ಕಟ್ಟಿಗೆಯಲ್ಲಿ ರಚನೆಯಾಗಿದೆ. ಕರಂಡ ಮಕುಟವನ್ನು ಹೊಂದಿದೆ. ಇಲ್ಲಿ ನಾಲ್ಕು ಭುಜಗಳಿದ್ದು, ಅಭಯ ಹಸ್ತ, ಮೋದಕ ಪಾತ್ರೆ, ಪಾಶಾಂಕುಶವನ್ನು ಹಿಡಿದಂತಿದೆ. ಕೊರಳಲ್ಲಿ ಹಾರ, ಕೈಗಡಗ, ಕಾಲಗಡಗಗಳಿದ್ದು, ಸಿಂಹಾಸನದ ಮೇಲೆ ಕುಳಿತಿದ್ದಾನೆ. ಶ್ರೀಮಂತಿಕೆಯ ಸಂಕೇತವನ್ನು ಸೂಚಿಸುತ್ತದೆ. ಈ ಶಿಲ್ಪವು ಸುಂದರವಾಗಿ ರಚನೆಯಾಗಿದ್ದು, ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿದೆ.[೯] ಈ ಶಿಲ್ಪವನ್ನು ಕೊಪ್ಪಳದ ಗವಿಸಿದ್ದೇಶ್ವರ ಮಠದಿಂದ ಡಾ. ಚಂದ್ರಶೇಖರ ಕಂಬಾರ ಅವರು ತರಿಸಿರುವುದು.

**೯. ಕುಳಿತ ಗಣೇಶ**

ಈ ಶಿಲ್ಪವು ಕಟ್ಟಿಗೆಯಲ್ಲಿ ರಚನೆಯಾಗಿದ್ದು, ಕುಳಿತ ಭಂಗಿಯಲ್ಲಿ ಅರ್ಧಾಸನದಲ್ಲಿದೆ. ಈ ಶಿಲ್ಪವು ವೃತ್ತಾಕಾರದ ಪೀಠದ ಮೇಲೆ ಕುಳಿತಿದ್ದು, ನಾಲ್ಕು ಭುಜಗಳನ್ನು ಹೊಂದಿದೆ. ಅಂಕುಶ, ಪಾಶ, ದಂತ, ಮೋದಕವನ್ನು ಹಿಡಿದಿದ್ದು ಏಕದಂತನಾಗಿದ್ದಾನೆ. ಸುಂದರವಾದ ಆಭರಣಗಳನ್ನು ಹೊಂದಿದ್ದು, ಸೊಂಡಿಲು ಬಲಮುರಿಯಾಗಿದ್ದು ವಿಶೇಷವಾಗಿದೆ. ಕೈಗಡಗಗಳು, ಕಾಲಗಡಗಗಳು ರಚನೆಯಾಗಿದ್ದು, ಸುಂರವಾದ ಪ್ರಭಾವಳಿಯನ್ನು ಹೊಂದಿದೆ. ಪ್ರಭಾವಳಿಯ ಮಧ್ಯದಲ್ಲಿ ಕೀರ್ತಿ ಮುಖ ರಚಿತವಾಗಿದೆ. ಕರಂಡ ಮಕುಟವನ್ನು ಹೊಂದಿದೆ. ಸೂಕ್ಷ್ಮವಾದ ಆಭರಣಗಳನ್ನು ಹೊಂದಿದ್ದು ಈ ಶಿಲ್ಪವು ಕನ್ನಡ ವಿಶ್ವವಿದ್ಯಾಯದ ವಸ್ತುಸಂಗ್ರಹಾಲಯದಲ್ಲಿದೆ.[೧೦] ಈ ಶಿಲ್ಪವನ್ನು ಕೊಪ್ಪಳದ ಗವಿಸಿದ್ದೇಶ್ವರ ಮಠದಿಂದ ತಂದಿರುವುದು.

**೧೦. ನಂಬಿಕೆಯ ಹಿನ್ನೆಲೆಯಲ್ಲಿ ರಚನೆಯಾದ ಗಣೇಶ**

ಈ ಶಿಲ್ಪವು ೨೦೧೧ರಲ್ಲಿ ಬಿಳಿ ಎಕ್ಕಿಯ ಮರದಿಂದ ರಚನೆಯಾಗಿದೆ. ಸೊಂಡಿಲು ಬಲಮುರಿ ಇದ್ದು, ಇವನಿಗೆ ಬಲಮುರಿ ಗಣೇಶ ಎಂದು ಕರೆಯುತ್ತಾರೆ.[೧೧] ಈ ಶಿಲ್ಪವನ್ನು ರಚಿಸಬೇಕಾದರೆ ರವಿವಾರ ಅಮವಾಸೆಯ ದಿವಸ ಬಿಳಿ ಎಕ್ಕಿಮರದ ಕಟ್ಟಿಗೆಯನ್ನು ತಂದು ನಿಯಮಾನುಸಾರ ಬಲಮುರಿ ಗಣೇಶನನ್ನು ರಚನೆ ಮಾಡಿ ಮೂರ್ತಿಯನ್ನು ಪೂಜಿಸಿದರೆ ಇಷ್ಟ ಫಲಗಳು ದೊರೆಯುವವು ಎಂದು ಜಾನಪದರು ನಂಬಿಕೊಂಡಿರುವ ವಿಚಾರ. ಆದರೆ ಈ ಶಿಲ್ಪವು ಎರಡುವರೆ ಇಂಚು ಎತ್ತರವಾಗಿದ್ದು, ವೃತ್ತಾಕಾರದ ಪೀಠದ ಮೇಲೆ ಕುಳಿತಿದ್ದಾನೆ. ಅಭಯ ಹಸ್ತ ಮತ್ತು ಮೋದಕವನ್ನು

---

೯. ಈ ಶಿಲ್ಪ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹವಾಗಿದೆ.

೧೦. ಈ ಶಿಲ್ಪ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹವಾಗಿದೆ.

೧೧. ಈ ಶಿಲ್ಪವು ಚಿತ್ತಾಮರದ ಕಲಾವಿದ ನಟರಾಜ ಶಿಲ್ಪಿ ಅವರ ಸಂಗ್ರಹದಲ್ಲಿದೆ.

ಹಿಡಿದಿರುವುದು ಸ್ಪಷ್ಟವಾಗುತ್ತದೆ. ಪೀಠದಲ್ಲಿ ಚಿಕ್ಕದಾದ ಇಲಿಯನ್ನು ಕೆತ್ತಲಾಗಿದೆ. ಇಲ್ಲಿ ಕಲಾವಿದನು ಯಾವುದೇ ರೀತಿಯ ಸೌಂದರ್ಯಕ್ಕೆ ಒತ್ತು ಕೊಡದೇ ವಾಣಿಜ್ಯದ ದೃಷ್ಟಿಯಿಂದ ರಚನೆ ಮಾಡಲಾಗಿದೆ. ಈ ಶಿಲ್ಪವು ಗುಲಬರ್ಗಾ ಜಿಲ್ಲೆಯ ಚಿತ್ತಾಪುರದ ನಟರಾಜ ಶಿಲ್ಪಿ ಎಂಬುವರ ಮನೆಯಲ್ಲಿ ಸಂಗ್ರಹವಾಗಿದೆ.

## ೧೧. ನೃತ್ಯ ಗಣೇಶ

ಈ ಶಿಲ್ಪವು ೪X೨೧/೨ ಅಳತೆಯಲ್ಲಿ ಕಟ್ಟಿಗೆಯಲ್ಲಿ ರಚನೆಯಾಗಿದ್ದು, ಗುಲಬರ್ಗಾದ ಕಲಾವಿದ ಪ್ರೊ. ವಿ.ಜಿ. ಅಂದಾನಿಯವರ ಸಂಗ್ರಹದಲ್ಲಿದೆ.[೧೨] ಆರು ಕೈಗಳಿದ್ದು ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ರುದ್ರಾಕ್ಷಿ ಮಾಲೆ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈ ಭಗ್ನವಾಗಿದ್ದು ಇನ್ನೊಂದು ಬಲಗೈಯಲ್ಲಿ ತೆನೆಯಂತಿರುವ ಆಯುಧವನ್ನು ಹಿಡಿದಿದ್ದು, ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಎಡಗಾಲಿನ ಪಕ್ಕದಲ್ಲಿ ಮೋದಕದ ಬುಟ್ಟಿ ಇದ್ದು ನಾಟ್ಯ ಭಂಗಿಯಲ್ಲಿದೆ. ಉದರ ಬಂಧವನ್ನು ಹೊಂದಿದ್ದು, ಕೊರಳಲ್ಲಿ ಸುಂದರವಾದ ಹಾರಗಳು, ಮೊಣಕಾಲವರೆಗೆ ಇಳಿ ಬಿದ್ದಿದ್ದ ಹಾರಗಳು, ತೋಳ ಬಂಧಿ, ಕರಂಡ ಮಕುಟವನ್ನು ಹೊಂದಿದೆ. ಹಿಂದೆ ಸುಂದರವಾದ ಪ್ರಭಾವಳಿ ಇದ್ದು, ಮಧ್ಯದಲ್ಲಿ ಕೀರ್ತಿ ಮುಖವನ್ನು ರಚಿಸಲಾಗಿದೆ. ಇದನ್ನು ಗಮನಿಸಿದಾಗ ಚೇರ ಶೈಲಿಯ ಪ್ರಭಾವಳಿಯನ್ನು ಹೋಲುತ್ತದೆ. ಆದರೆ ಕಲಾವಿದನು ಅಲಂಕಾರಕ್ಕೆ ಹೆಚ್ಚು ಮಹತ್ವ ಕೊಟ್ಟಿರುವುದು ಕಂಡುಬರುತ್ತದೆ.

## ೧೨. ಬ್ಯಾಟಿಂಗ್ ಮಾಡುತ್ತಿರುವ ಗಣೇಶ

ಈ ಶಿಲ್ಪವನ್ನು ಅಂತರ್‌ಜಾಲದಿಂದ ಪಡೆದುಕೊಳ್ಳಲಾಗಿದೆ.[೧೩] ಈ ಕಲಾಕೃತಿಯು ಕೆಸರಿನಲ್ಲಿ ಅರಳಿದ ಕಮಲದಂತೆ ಕಲಾವಿದನ ಕೈಯಲ್ಲಿ ಅರಳಿದ ಕೃತಿಯಾಗಿದೆ. ಕಲಾವಿದನಿಗೆ ಕ್ರಿಕೆಟ್ ಆಟದ ಒಂದು ಆಧಾರದ ಮೇಲೆ ಈ ಕೃತಿಯನ್ನು ರಚಿಸಲಾಗಿದೆ. ಕ್ರಿಕೆಟಿಗನಿಗೂ, ಗಣಪತಿಗೂ ಸಂಬಂಧವನ್ನು ಸೂಚಿಸಿದ್ದಾನೆ. ಕಲಾವಿದನು ಗಣೇಶನನ್ನು ವಿವಿಧ ಆಕಾರ ರೂಪಗಳಲ್ಲಿ ಮತ್ತು ತನ್ನ ಕಾರ್ಯಗಳಲ್ಲಿ ಬಳಸಿಕೊಂಡ ಹಾಗೆ ಕ್ರಿಕೆಟ್ ಆಟಕ್ಕೂ ಬಳಸಿಕೊಂಡಿರುವುದು ವಿಶೇಷ. ಇಲ್ಲಿ ಗಣೇಶನು ಬ್ಯಾಟಿಂಗ್ ಮಾಡುತ್ತಿರುವುದು ನಿಂತ ಭಂಗಿ ಮತ್ತು ಅವನ ಭಾವನೆಗಳನ್ನು ನಿಜ ಆಟಗಾರರ ಭಾವನೆಗಳಿಗೆ ಹೋಲುವಂತೆ ರಚಿಸಿದ್ದಾರೆ. ಇಲ್ಲಿ ಗಣೇಶನಿಗೆ ಯಾವುದೇ ಹೆಲ್‌ಮೆಟ್ ಬಳಸಿಲ್ಲ, ಶಿರಸ್ತ್ರಕವನ್ನು ಹೊಂದಿದೆ. ಇಲ್ಲಿ ಗಣೇಶನು ಚಂಡನ್ನು ಎಸೆಯುತ್ತಿರುವುದನ್ನು ಗಮನಿಸುವ ಹಾಗೆ ಕಂಡುಬರುತ್ತದೆ. ಆಟದಲ್ಲಿ ಮಗ್ನನಾಗಿದ್ದಾನೆ.

---

೧೨. ಈ ಶಿಲ್ಪವು ಗುಲಬರ್ಗಾದ ಕಲಾವಿದ ಪ್ರೊ. ವಿ.ಜಿ. ಅಂದಾನಿಯವರ ಸಂಗ್ರಹದಲ್ಲಿದೆ.

೧೩. ಈ ಶಿಲ್ಪವನ್ನು ಅಂತರ್‌ಜಾಲದಿಂದ ಪಡೆದುಕೊಳ್ಳಲಾಗಿದೆ.

## ೧೩. ಸಿಂಹಾಸನದ ಮೇಲೆ ಕುಳಿತ ಗಣೇಶ

ಈ ಶಿಲ್ಪವನ್ನು ಏಕಪ್ಪ ರಾ. ಚಿತ್ರಗಾರ ಸಾ॥ ಕಿನ್ನಾಳ ಇವರು ೨೦೦೭ರಲ್ಲಿ ರಚಿಸಿರುವ ಶಿಲ್ಪ ಇದಾಗಿದೆ.[೧೪] ಈ ಶಿಲ್ಪಕೃತಿಯನ್ನು ಮರದ ಮಾಧ್ಯಮದಿಂದ ರಚಿಸಿದ್ದು, ಅತಿ ಸುಂದರವಾಗಿ ಕಿರೀಟವನ್ನು ರಚಿಸಿದ್ದು ಅದಕ್ಕೆ ಬಂಗಾರ ಬಣ್ಣದ ಲೇಪನ ಮಾಡಿ ಅದರ ಮೇಲೆ ಕೆಂಪು ಮತ್ತು ಹಸಿರು ಬಣ್ಣದಿಂದ ಮಣಿಗಳ ಹಾಗೆ ಕಾಣುವಂತೆ ರಚಿಸಿದ್ದಾರೆ. ಉಬ್ಬಿರುವಂತ ಹಣೆಯನ್ನು ಹೊಂದಿದ್ದು, ತನ್ನ ಸೊಂಡಿಲನ್ನು ಎಡಕ್ಕೆ ಮಡಚಿಕೊಂಡಿದ್ದು ತನ್ನ ಕೊರಳಿಗೆ ಸುಂದರವಾದ ಸರಗಳನ್ನು ಹಾಕಿಕೊಂಡಿರುವುದನ್ನು ಕಾಣುತ್ತೇವೆ. ಇಲ್ಲಿ ನಾಲ್ಕು ಕೈಗಳನ್ನು ಹೊಂದಿದ್ದು, ಎಡಭಾಗದ ಕೈಗಳಲ್ಲಿ ತ್ರಿಶೂಲ ಮತ್ತು ಈಶ್ವರ ಲಿಂಗವನ್ನು ಹಿಡಿದಿದ್ದು, ಬಲಭಾಗದ ಕೈಗಳಲ್ಲಿ ತ್ರಿಶೂಲ ಮತ್ತು ಅಭಯ ಹಸ್ತದಿಂದ ಕೂಡಿದೆ. ಕೈಗಳಲ್ಲಿ ಕೈಗಡಗಗಳನ್ನು ಹಾಕಿಕೊಂಡಿದ್ದು, ಮೈಬಣ್ಣವನ್ನು ಗುಲಾಬಿ, ಹಳದಿ, ಬಿಳಿ ಬಣ್ಣದಿಂದ ರಚಿಸಿದ್ದು, ತನ್ನ ಸೊಂಟಕ್ಕೆ ಹಳದಿ ಬಣ್ಣದ ಬಟ್ಟೆಯನ್ನು ರಚಿಸಿದ್ದು, ಗಣೇಶನು ಅರ್ಧಪರ್ಯಂಕಾಸನದಿಂದ ಕೂಡಿರುವಂತೆ ಕಾಣುತ್ತದೆ. ಇಲ್ಲಿ ಗಣೇಶನನ್ನು ನೋಡಿದರೆ ಸಿಂಹಾಸನದ ಮೇಲೆ ಕುಳಿತಿರುವ ಗಣೇಶನನ್ನು ಕಾಣಬಹುದಾಗಿದೆ. ಇದು ಕಿನ್ನಾಳದಲ್ಲಿ ರಚನೆಯಾದಂತಹ ಮೂರ್ತಿಯಾಗಿದ್ದು ಸುಂದರವಾಗಿ ಕಾಣುವಂತೆ ರಚಿಸಿದ್ದಾರೆ. ಈ ಶಿಲ್ಪವು ರಚನೆ ಮಾಡಿದ ಕಲಾವಿದರ ಸಂಗ್ರಹದಲ್ಲಿದೆ.

## ೧೪. ಲೋಹ ಮಾಧ್ಯಮ

ಪ್ರಾಚೀನ ಮಾನವನ ಸೃಜನಶೀಲ ಮನಸ್ಸು ಅಭಿವ್ಯಕ್ತಿಗಾಗಿ ಆರಿಸಿಕೊಂಡ ಮಾಧ್ಯಮಗಳಲ್ಲಿ ಮಣ್ಣು, ಕಟ್ಟಿಗೆ, ಲೋಹಗಳು ಪ್ರಮುಖವಾದವುಗಳು. ಪ್ರಾಚೀನ ಕಾಲದಿಂದಲೇ ಹಲವಾರು ನಂಬಿಕೆ, ಮತ–ಧರ್ಮಗಳ ಹಿನ್ನೆಲೆಯಲ್ಲಿ ವಿವಿಧ ಶೈಲಿಗಳಲ್ಲಿ, ಮಾಧ್ಯಮಗಳಲ್ಲಿ, ಆಕಾರಗಳಲ್ಲಿ ಶಿಲ್ಪಗಳು ಸೃಷ್ಟಿಯಾಗುತ್ತಾ ಬಂದಿವೆ. ಶಿಲ್ಪ ಸೃಷ್ಟಿ ಮುಖ್ಯವಾಗಿ ನಾಲ್ಕು ಬಗೆಯಲ್ಲಿ ಆಗುತ್ತದೆ. ಕೆತ್ತುವುದು, ಮೆತ್ತುವುದು, ಅಂಟಿಸುವುದು ಈ ಕ್ರಿಯೆಗೆ ಶಿಲೆ, ದಂತ, ಮರ, ಮಣ್ಣು ಮುಖ್ಯವಾಗಿ ಎರಕ ಹೊಯ್ಯುವ ಕ್ರಿಯೆ ಸೃಷ್ಟಿಯಾಗುವುದೇ ಲೋಹ ಶಿಲ್ಪಕಲೆ

ಲೋಹ ಮಾಧ್ಯಮದಲ್ಲಿ ಶಿಲ್ಪಗಳು ಪ್ರಾಚೀನ ಕಾಲದಿಂದಲೇ ರಚನೆಯಾಗುತ್ತ ಬಂದಿರುವುದನ್ನು ನಾವು ಹರಪ್ಪಾ–ಮೆಹೊಂಜೋದಾರೋಗಳ ದೊರೆತ ಕಂಚಿನ ಶಿಲ್ಪಗಳಿಂದ ತಿಳಿದುಬರುತ್ತದೆ. ಕ್ರಿ.ಪೂ. ಒಂದು ಸಾವಿರಕ್ಕೂ ಹಿಂದಿನ ತಾಮ್ರ ಶಿಲಾಯುಗದಿಂದ ಈ ಲೋಹ ಶಿಲ್ಪಕಲೆಯ ಸೃಷ್ಟಿ ರೂಢಿಯಲ್ಲಿತ್ತೆಂಬುದು ಹಳ್ಳೂರು, ತೆಕ್ಕಲಕೋಟೆಗಳಲ್ಲಿ ಜರುಗಿದ ಉತ್ಖನನಗಳಿಂದ ಸಾಬೀತಾಗಿದ್ದು, ಪ್ರಾಚೀನ ಸ್ವರೂಪವನ್ನು ಈ ಲೋಹ ಶಿಲ್ಪಕಲೆಯಲ್ಲಿ ಕಾಣಬಹುದು. ಅಲ್ಲದೇ ಪಿಕ್ಕಿಹಾಳ, ಮಸ್ಕಿ, ಸಂಗನಕಲ್ಲು, ಸಂಡೂರು, ಹಟ್ಟಿ, ಕೋಲಾರಗಳಲ್ಲಿ ಲೋಹದ ಕುಲುಮೆಗಳು ಇದ್ದುವೆಂದು ಸಂಶೋಧನೆಯಿಂದ ತಿಳಿದುಬರುತ್ತದೆ. ಮುಂದೆ ಕರ್ನಾಟಕದಲ್ಲಿ ಶಾತವಾನರ ಕಾಲದಿಂದ

---

೧೪. ಈ ಶಿಲ್ಪಕಲಾಕೃತಿಯು ಕಿನ್ನಾಳದ ಏಕಪ್ಪ ರಾ. ಚಿತ್ರಗಾರ ಇವರ ಸಂಗ್ರಹದಲ್ಲಿದೆ.

ವಿಜಯನಗರದ ಕಾಲದವರೆಗೆ ಕಾಣಬಹುದಾಗಿದೆ. ಇವರ ಕಾಲದಲ್ಲಿ ಹಲವಾರು ದೇವಾನುದೇವತೆಗಳ ಮೂರ್ತಿಗಳನ್ನು ರಚಿಸುವುದಲ್ಲದೆ, ಗಣೇಶ ಮೂರ್ತಿ ರಚನೆಯನ್ನು ಮಾಡಿರುವುದು ಕಂಡುಬರುತ್ತದೆ.[೧೫] ಈ ಆಧುನಿಕ ಯುಗದಲ್ಲಿ ಈ ಲೋಹ ಶಿಲ್ಪವು ಹೆಚ್ಚು ಪ್ರಗತಿಯಲ್ಲಿದೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ. ಹಲವಾರು ಶಿಲ್ಪಗಳಲ್ಲಿ ಮತ್ತು ಭಿತ್ತಿಶಿಲ್ಪಗಳಲ್ಲಿ ಬಳಸಿಕೊಳ್ಳಲಾಗಿದೆ.

**೧೫. ಲೋಹದ ಗಣೇಶ ಶಿಲ್ಪ**

ಈ ಶಿಲ್ಪವನ್ನು ೨೧/೨X೨ ಅಳತೆಯಲ್ಲಿ ಲೋಹದಿಂದ ತಯಾರಿಸಲಾಗಿದೆ.[೧೬] ಗಣೇಶನು ಸುಖಾಸೀನನಾಗಿದ್ದು, ಚೌಕಾಕಾರದ ಪೀಠದ ಮೇಲೆ ಕುಳಿತಿದ್ದಾನೆ. ನಾಲ್ಕು ಭುಜಗಳಿದ್ದು, ಮೇಲ್ಗಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ಅಭಯ (ಎಡ) ಮೋದಕ ಪಾತ್ರೆ ಇದೆ. ಪೀಠದ ಮೇಲೆ ಕಮಲದ ದಳಗಳನ್ನು ಮಾಡಿ ಅದರಲ್ಲಿ ಈ ಶಿಲ್ಪವು ಕುಳಿತಿರುವಂತೆ ಲೋಹದಿಂದ ರಚಿಸಲಾಗಿದೆ. ಪೀಠದ ಮೇಲೆ ಕುಳಿತ ಗಣೇಶನ ಎಡಗಾಲು ಬಳಿ ಮೋದಕವನ್ನು ಹಿಡಿದಿರುವ ಮೂಷಿಕವನ್ನು ರಚಿಸಲಾಗಿದೆ. ಕರಂಡ ಮಕುಟವಿದ್ದು ಕಿರಿಟಕ್ಕೆ ಸುಂದರವಾದ ಪ್ರಭಾವಳಿ ಇದೆ. ತೋಳಿಗೆ ಆಭರಣಗಳಿವೆ. ಏಕದಂತನಾಗಿದ್ದು ಸೊಂಡಿಲಲ್ಲಿ ರತ್ನ ಕುಂಭವನ್ನು ಹಿಡಿದಿದ್ದಾನೆ. ಒಟ್ಟಾರೆಯಾಗಿ ಗಣೇಶನನ್ನು ನೋಡಿದಾಗ ಬೇಡಿದ ವರವನ್ನು ಪಡೆದುಕೊಳ್ಳುವ ಹಾಗಿದೆ. ಈ ಶಿಲ್ಪವು ರಾಯಚೂರಿನ ಕುಬೇರ ಹೊಟೇಲ್‌ನ ಸಂಗ್ರಹದಲ್ಲಿದೆ. ಈ ಶಿಲ್ಪವನ್ನು ಮೈಸೂರಿನಲ್ಲಿ ನಡೆದ ಶಿಲ್ಪ ಪ್ರದರ್ಶನದಲ್ಲಿ ತಂದಿರುವ ಶಿಲ್ಪವಾಗಿದೆ.

**೧೬. ಕುಳಿತಿರುವ ಗಣೇಶ**

ಈ ಗಣೇಶ ಶಿಲ್ಪವು ೨X೧ ಅಡಿ ಅಳತೆಯಲ್ಲಿದ್ದು, ಬಾದಾಮಿಯ ರಾಜಸಂಗಮ ಹೊಟೇಲ್‌ನ ಸಂಗ್ರಹದಲ್ಲಿದೆ.[೧೭] ಇದು ಅರ್ಧಾಸನದಲ್ಲಿ ಭದ್ರ ಪೀಠದ ಮೇಲಿದೆ. ನಾಲ್ಕು ಕೈಗಳನ್ನು ಹೊಂದಿದ್ದು, ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ದಂತ, ಎಡಗೈಯಲ್ಲಿ ಮೋದಕ, ಸೊಂಡಿಲಲ್ಲಿ ರತ್ನ ಕುಂಭವನ್ನು ಹಿಡಿದಿದ್ದಾನೆ. ಕೊರಳಲ್ಲಿ ಆಭರಣಗಳು, ಕಾಲಗಡಗಗಳು, ಕೈಗಡಗಗಳು ಇವೆ. ಎರಡು ಎಳೆಯ ಯಜ್ಞೋಪವಿತವಿದೆ. ಸುಂದರವಾದ ಕಿರೀಟದ ಉದರ ಬಂಧವಿದೆ. ಮುಗ್ದಲ ಪುರಾಣ ಪ್ರಕಾರ ಹರಿದ್ರಾ ಗಣಪತಿ ಎಂದು ಕರೆಯುವರು. ವೃತ್ತಾಕಾರದ ಪೀಠದ ಮೇಲೆ ಕುಳಿತಿದ್ದು, ಆ ಪೀಠಕ್ಕೆ ಮೂಷಿಕನು ಏರುತ್ತಿರುವುದನ್ನು ರಚಿಸಲಾಗಿದೆ. ಈ ಶಿಲ್ಪವು ಕಂಚು ಮಾಧ್ಯಮದಲ್ಲಿ ರಚನೆಯಾಗಿದೆ.

**೧೭. ಲೋಹ ಮಾಧ್ಯಮದಲ್ಲಿ ಗಣೇಶ ಶಿಲ್ಪ**

ಈ ಶಿಲ್ಪವು ಲೋಹ ಮಾಧ್ಯಮದಲ್ಲಿ ರಚನೆಯಾಗಿದ್ದು, ೪X೧೧/೨ ಅಡಿ ಅಳತೆಯಲ್ಲಿದ್ದು, ನಾಟ್ಯ ಭಂಗಿಯಲ್ಲಿದೆ. ಇಲ್ಲಿ ಗಣೇಶನು ನಟರಾಜನ ರೂಪದಲ್ಲಿ ರಚನೆಯಾಗಿರುವುದು ವಿಶೇಷವಾಗಿದೆ.

---

೧೫.ಕರೀಗೌಡ ಬೀಚನಹಳ್ಳಿ (ಸಂ) ಕರಕುಶಲ ಕಲೆಗಳು, ಶಿವಾನಂದ ಎಚ್. ಬಂಟನೂರು-ಪು-೧೮,೧೯

೧೬.ಈ ಶಿಲ್ಪವು ರಾಯಚೂರಿನ ಕುಬೇರ ಹೊಟೇಲ್‌ನ ಸಂಗ್ರಹದಲ್ಲಿದೆ.

೧೭. ಬಾದಾಮಿಯ ರಾಜಸಂಗಮ ಹೊಟೇಲ್‌ನ ಸಂಗ್ರಹದಲ್ಲಿದೆ

ಆರು ಭುಜಗಳನ್ನು ಹೊಂದಿದ್ದು ಅಂಕುಶ, ಪಾಶ, ದಂತ ಇನ್ನೂ ವಿವಿಧ ಆಯುಧಗಳನ್ನು ಹಿಡಿದು ನೃತ್ಯ ಮಾಡುತ್ತಿರುವುದಾಗಿದೆ.[೧೮] ಇಲ್ಲಿ ಗಣೇಶನು ಕರಂಡ ಮಕುಟವನ್ನು ಹೊಂದಿದ್ದು, ಕೈಗಡಗ, ಕಾಲಗಡಗಗಳು ಮತ್ತು ಆಭರಣಗಳನ್ನು ರಚಿಸಲಾಗಿದೆ. ಉದರ ಬಂಧವನ್ನು ಹೊಂದಿದ್ದಾನೆ. ಗಣೇಶನು ವೃತ್ತಾಕಾರದ ಪೀಠದ ಮೇಲೆ ಉಲ್ಲಾಸದಲ್ಲಿ ನೃತ್ಯ ಮಾಡುತ್ತಿರುವ ಶಿಲ್ಪ ಇದಾಗಿದೆ. ಈ ಕಲಾಕೃತಿಯು ಗುಲಬರ್ಗಾದ ಕಲಾವಿದ ವಿ.ಜಿ. ಅಂದಾನಿಯವರ ಸಂಗ್ರಹದಲ್ಲಿದೆ.

### ೧೮. ನಾಗರಪಣಿಯ ಮೇಲೆ ಕುಳಿತ ಗಣೇಶ

ಈ ಕಲಾಕೃತಿಯನ್ನು ಗೋರಕ್ ಮದುಕರ್ ಬಾವ್‌ಸರ್ ೨೦೦೮ರಲ್ಲಿ ರಚಿಸಿದ್ದಾರೆ. ಶಿಲ್ಪಕೃತಿಯಲ್ಲಿ ಗಣೇಶನು ನಾಗರಪಣಿಯ ಮೇಲೆ ಕುಳಿತಿದ್ದು, ಸುಂದರವಾದ ವಿನ್ಯಾಸದಿಂದ ಕೂಡಿದ ಕಿರೀಟ, ಅಗಲವಾದ ಕಿವಿಗಳು, ಉಬ್ಬಿದಂತಹ ಹಣೆಯ ಭಾಗ, ಹಣೆಯ ಮೇಲೆ ಮೂರು ಪಟ್ಟಗಳು, ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಂಡಿದ್ದು ಇಲ್ಲಿಯು ಸಹ ನಾಲ್ಕು ಕೈಗಳನ್ನು ಹೊಂದಿದ್ದು, ಬಲಗೈಯಲ್ಲಿ ಪಾಶ, ದಂತ, ಎಡಗೈಯಲ್ಲಿ ಪಾಶ ಮತ್ತು ತಂಬಿಗೆಯನ್ನು ಹಿಡಿದಿರುವುದನ್ನು ಕಾಣುತ್ತೇವೆ.[೧೯] ತನ್ನ ಕೊರಳಿಗೆ ವಿವಿಧ ವಿನ್ಯಾಸದಿಂದ ಕೂಡಿದಂತಹ ಸರಗಳನ್ನು ರಚಿಸಿದ್ದು, ದೊಡ್ಡ ಗಾತ್ರದ ಗಣಪತಿಯು ತನ್ನ ಸೊಂಟಕ್ಕೆ ಗೆಜ್ಜೆಯಂತೆ ಹೋಲುವ ಒಂದು ಪಟ್ಟಿಯನ್ನು ಸುತ್ತಿಕೊಂಡಿದ್ದು, ಸೊಂಟಕ್ಕೆ ವಸ್ತ್ರವನ್ನು ಧರಿಸಿದ್ದಾನೆ. ಕಾಲುಗಳಿಗೆ ಕಾಲಗಡಗವನ್ನು ಹಾಕಿಕೊಂಡಿದ್ದು ಕುಳಿತಿರುವುದನ್ನು ಕಾಣುತ್ತೇವೆ. ಇಲ್ಲಿ ನಾಗರ ಹಾವನ್ನು ನೋಡಿದರೆ ಐದು ತಲೆಗಳನ್ನು ಹೊಂದಿದ್ದು, ಸುಂದರವಾಗಿ ರಚನೆ ಮಾಡಿದ್ದಾರೆ. ಹಿಂಭಾಗದಲ್ಲಿ ಕಪ್ಪುಬಣ್ಣದಿಂದ ಕೂಡಿರುವಂತಹದಿದ್ದು ಆಧುನಿಕ ಕಾಲದಲ್ಲಿ ಕಲಾವಿದನು ರಚಿಸುವ ಶೈಲಿ ವಿಭಿನ್ನವಿರುವುದು ಎಂಬುದಕ್ಕೆ ಈ ಶಿಲ್ಪಾಕೃತಿಯ ಹಿನ್ನೆಲೆಯನ್ನು ಗಮನಿಸಬಹುದಾಗಿದೆ. ಈ ಕಲಾಕೃತಿಯು ಕಲಾವಿದ ಗೋರಕ್ ಬಾವಸರ್ ಅವರ ಮನೆಯಲ್ಲಿ ಸಂಗ್ರಹಗೊಂಡಿದೆ.

### ೧೯. ಪ್ಲಾಸ್ಟರ್ ಆಫ್ ಪ್ಯಾರಿಸ್ ಮಾಧ್ಯಮ

ಈ ಮಾಧ್ಯಮವು ಪ್ರಸ್ತುತ ಸಂದರ್ಭದಲ್ಲಿ ಹೆಚ್ಚು ಬಳಕೆಯಲ್ಲಿದ್ದುದು ಕಂಡುಬರುತ್ತದೆ. ಈ ಮಾಧ್ಯಮವು ಬೇಗನೆ ಒಣಗುವುದರಿಂದ ಮತ್ತು ಯಾವುದೇ ಶಿಲ್ಪವನ್ನು ರಚಿಸುವುದಕ್ಕೆ ಸುಲಭವಾಗುವುದರಿಂದ ಈ ಮಾಧ್ಯಮವನ್ನು ಹೆಚ್ಚು ಬಳಸಿಕೊಳ್ಳುತ್ತಿದ್ದಾರೆ.[೨೦] ಈ ಮಾಧ್ಯಮದಲ್ಲಿ ಎರಡು ರೀತಿಯಲ್ಲಿ ಶಿಲ್ಪಗಳನ್ನು ರಚಿಸುತ್ತಾರೆ. ಕೆತ್ತುವ ಮತ್ತು ಮೆತ್ತುವ ವಿಧಾನದಲ್ಲಿ ರಚಿಸುತ್ತಾರೆ. ಈ ಮಾಧ್ಯಮವು ಹೆಚ್ಚು ಸಮಯ ತೆಗೆದುಕೊಳ್ಳುವುದಿಲ್ಲ. ಗಣೇಶೋತ್ಸವ ಸಂದರ್ಭದಲ್ಲಿ ಈ ಮಾಧ್ಯಮವನ್ನು ಬಳಸಿ ಹೆಚ್ಚು ಗಣೇಶನ ಶಿಲ್ಪಗಳನ್ನು ರಚಿಸುವುದು ಕಂಡುಬರುತ್ತದೆ. ಇಲ್ಲಿ ಐದು

---

೧೮. ಈ ಕಲಾಕೃತಿಯು ಗುಲಬರ್ಗಾದ ಕಲಾವಿದ ವಿ.ಜಿ. ಅಂದಾನಿಯವರ ಸಂಗ್ರಹದಲ್ಲಿದೆ.

೧೯. ಈ ಕಲಾಕೃತಿಯು ಕಲಾವಿದ ಗೋರಕ್ ಬಾವಸರ್ ಅವರ ಮನೆಯಲ್ಲಿ ಸಂಗ್ರಹಗೊಂಡಿದೆ.

೨೦. ಈ ಕಲಾಕೃತಿಗಳನ್ನು ಅಂತರ್‌ಜಾಲದಿಂದ ಪಡೆದುಕೊಳ್ಳಲಾಗಿದೆ.

ದಿನಗಳವರೆಗೆ ಪೂಜಿಸಿ ವಿಸರ್ಜಿಸುವಂತಹ ಮೂರ್ತಿಗಳನ್ನು ಮಾತ್ರ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಹೆಚ್ಚಾಗಿ ರಚಿಸುತ್ತಾರೆ. ಈ ಮಾಧ್ಯಮವು ಗಣೇಶನ ಶಿಲ್ಪಗಳನ್ನು ರಚಿಸುವುದಕ್ಕೆ ಮಾತ್ರ ಹೆಚ್ಚಾಗಿ ಬಳಸಿಕೊಳ್ಳುತ್ತಾರೆ.

**೨೦. ನಾಟ್ಯ ಗಣಪತಿ ಶಿಲ್ಪ**

ಈ ಶಿಲ್ಪಾಕೃತಿಯಲ್ಲಿ ರಚನೆಯಾದ ಗಣೇಶನ ಮೂರ್ತಿಯ ನೃತ್ಯ ಭಂಗಿಯಲ್ಲಿದೆ. ವಿವಿಧ ವಿನ್ಯಾಸದಿಂದ ಕೂಡಿರುವಂತ ಕಿರೀಟ ತನ್ನ ಸೊಂಡಿಲನ್ನು ಎಡಭಾಗಕ್ಕೆ ತಿರುಗಿಸಿಕೊಂಡು ದೊಡ್ಡ ಗಾತ್ರದ ಕಿವಿಗಳನ್ನು ಹೊಂದಿದ್ದು, ಎರಡು ದಂತಗಳನ್ನು ಕಾಣಬಹುದು.[೨೧] ನಾಲ್ಕು ಭುಜಗಳನ್ನು ಹೊಂದಿರುವ ಗಣೇಶ ತನ್ನ ಬಲಕ್ಕೆ ದಂತ ಮತ್ತು ಕೊಡಲಿಯನ್ನು ಹಿಡಿದಿದ್ದು, ಎಡಗೈಯಲ್ಲಿ ಪಾಶ ಮತ್ತು ಬೀಜಪೂರ ಹೊಂದಿರುವುದನ್ನು ಕಾಣುತ್ತೇವೆ. ಕೊರಳಲ್ಲಿ ವಿವಿಧ ವಿನ್ಯಾಸದಿಂದ ಕೂಡಿರುವಂತ ಸರಗಳು, ಸೊಂಟಕ್ಕೆ ವಿವಿಧ ವಿನ್ಯಾಸದಲ್ಲಿ ತಯಾರಿಸಿದ ವಸ್ತ್ರವನ್ನು ಕಟ್ಟಿಕೊಂಡಿದ್ದು, ಕಾಲುಗಳಿಗೆ ಕಾಲಗಡಗವನ್ನು ಧರಿಸಿದ್ದು, ಕೊರಳಲ್ಲಿ ಯಜ್ಞೋಪಮಿತವಿದೆ. ಗಣೇಶ ವಾಹನವಾದ ಪ್ರಭಾವಳಿಯಿದ್ದು, ಅದು ವಿವಿಧ ವಿನ್ಯಾಸಗಳಿಂದ ಕೂಡಿರುವುದನ್ನು ಕಾಣಬಹುದು. ಕಲಾವಿದರು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಈ ಶಿಲ್ಪವನ್ನು ಅತಿ ಸುಂದರವಾಗಿ ರಚಿಸಿದ್ದಾರೆ.

**೨೧. ಸಂಹಾರ ಭಾವದಲ್ಲಿ ನಿಂತ ಗಣೇಶ**

ಈ ಕೃತಿಯಲ್ಲಿ ಗಣೇಶನು ಸಂಹಾರ ಭಾವದಲ್ಲಿ ತ್ರಿಶೂಲವನ್ನು ಹಿಡಿದು ನಿಂತಿದ್ದಾನೆ. ನಾಲ್ಕು ಕೈಗಳನ್ನು ಹೊಂದಿದ್ದು, ಎರಡು ಕೈಗಳಲ್ಲಿ ತ್ರಿಶೂಲವನ್ನು ಹಿಡಿದಿದ್ದು, ಒಂದು ಕೈಯಲ್ಲಿ ಸರ್ಪವನ್ನು ಹಿಡಿದಿದ್ದು, ಒಂದು ಬಲಗೈಯನ್ನು ಅಭಯ ಹಸ್ತವನ್ನು ತೋರಿದ್ದಾನೆ.[೨೨] ಇಲ್ಲಿ ಗಣೇಶನು ತನ್ನ ಬಲಗಾಲ ಮಂಡಿಯನ್ನು ವಾಹನವಾದ ಇಲಿಯ ಮೇಲೆ ಊರಿ ತ್ರಿಶೂಲದಿಂದ ಏನೋ ಸಂಹರಿಸುವಂತಿದೆ. ಈ ಕೃತಿಯಲ್ಲಿ ವೀರ ಭಾವವನ್ನು ಕಾಣಬಹುದು. ಈ ಕೃತಿಯಲ್ಲಿ ಯಾವುದೇ ರೀತಿಯ ಆಭರಣಗಳು ಕಂಡುಬರುವುದಿಲ್ಲ. ಜನಿವಾರ ಮತ್ತು ಕೈಗಡಗಗಳನ್ನು ಕಾಣಬಹುದು. ಈ ಕೃತಿಯು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚನೆಯಾಗಿದೆ.

**೨೨. ನಾಟ್ಯ ಗಣೇಶ**

ಈ ಶಿಲ್ಪವು ಆಧುನಿಕ ಭಿತ್ತಿಶಿಲ್ಪವಾಗಿದ್ದು, ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚನೆಯಾಗಿದೆ. ಇಲ್ಲಿ ಗಣೇಶನನ್ನು ಕಲಾವಿದ ತನ್ನ ರೂಪದಲ್ಲಿ ಕಂಡು ಮುಖವನ್ನು ಗಣಪತಿಯ ಮುಖವನ್ನು ಅಳವಡಿಸಿದ್ದಾನೆ. ಇಲ್ಲಿ ಗಣೇಶನು ಎರಡು ಕೈಗಳನ್ನು ಹೊಂದಿದ್ದು, ಬಲಗೈಯಲ್ಲಿ ಪಾಶ, ಎಡಗೈಯಲ್ಲಿ ಪುಸ್ತಕವನ್ನು ಹಿಡಿದಿದ್ದು, ದಾಸವಾಳದ ಹೂವಿನ ಮೇಲೆ ನೃತ್ಯ ಮಾಡುತ್ತಿರುವ ಹಾಗಿದೆ.[೨೩]

---

೨೧,೨೨,೨೩. ಈ ಕಲಾಕೃತಿಗಳನ್ನು ಅಂತರ್‌ಜಾಲದಿಂದ ಪಡೆದುಕೊಳ್ಳಲಾಗಿದೆ.

ಗಣೇಶನು ಸಣಕಲಾಗಿದ್ದು ವಿಶೇಷವಾಗಿದೆ. ಗಣೇಶನು ಹಿಡಿದಿರುವ ಪಾಶ ಮತ್ತು ಪುಸ್ತಕವನ್ನು ಗಮನಿಸಿದಾಗ ವಿದ್ಯೆಯೇ ಬಾಳಿನ ಬೆಳಕು ಎಂದು ಹೇಳುವಲ್ಲಿ ಸಂದೇಹವಿಲ್ಲ ಎನ್ನುವ ಹಾಗೆ ಈ ಭಿತ್ತಿಶಿಲ್ಪ ರಚನೆಯಾಗಿದೆ. ಪಕ್ಕದಲ್ಲಿ ಇಲಿಯನ್ನು ರಚಿಸಿದ್ದಾರೆ.

### ೨೩. ನಾಟ್ಯ ಗಣಪ

ಈ ಶಿಲ್ಪವು ೨೦೧೦ರಲ್ಲಿ ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದಲ್ಲಿ ನಡೆದ ಪರೀಕ್ಷೆಯಲ್ಲಿ ರಚಿಸಲಾಗಿದೆ.[೨೪] ಈ ಶಿಲ್ಪವನ್ನು ನೋಡಿದಾಕ್ಷಣ ಗಣಪನು ನೃತ್ಯ ಮಾಡುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ಗಣಪನು ಸುಂದರವಾದ ಚಿಕ್ಕ ಕಣ್ಣುಗಳನ್ನು, ದೊಡ್ಡ ಕಿವಿಗಳು, ಉಬ್ಬಿದಂತ ಹಣೆ, ಹಣೆಯ ಮೇಲೆ ತ್ರಿಶೂಲ ಕಿರೀಟ ವಿನ್ಯಾಸ, ಹಿಂದಿನ ಭಾಗದಲ್ಲಿ ಪ್ರಭಾವಳಿ ಮೊಟಕಾಗಿರುವಂತಹ ಸೊಂಡಿಲು, ಕೊರಳಿಗೆ ವಿವಿಧ ವಿನ್ಯಾಸದಿಂದ ಕೂಡಿರುವಂತಹ ಸರಗಳ ಜನಿವಾರವನ್ನು ಧರಿಸಿದ್ದು, ನಾಲ್ಕು ಕೈಗಳನ್ನು ಹೊಂದಿದ್ದು ಆ ನಾಲ್ಕು ಕೈಗಳು ವಿವಿಧ ಆಕಾರಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ಕೈಗಳಿಗೆ ಕೈಗಡಗ, ಕಾಲುಗಳಿಗೆ ಕಾಲಗಡಗವನ್ನು ಧರಿಸಿದ್ದು, ಸೊಂಟಕ್ಕೆ ವಸ್ತ್ರವನ್ನು ಸುತ್ತಿಕೊಂಡಿರುವುದನ್ನು ಕಾಣುತ್ತೇವೆ. ಗಣೇಶನು ತನ್ನ ಬಲಗಾಲಿನ ಸಹಾಯದಿಂದ ನಿಂತಿದ್ದು ತನ್ನ ಎಡಗಾಲನ್ನು ಬಲಗಾಲಿನ ಮೊಣಕಾಲಿನ ಮೇಲೆ ಇಟ್ಟು ನರ್ತಿಸುತ್ತಿರುವುದನ್ನು ಕಾಣುತ್ತೇವೆ. ಹಿನ್ನೆಲೆಯಲ್ಲಿ ಒಂದು ಪ್ರಭಾವಳಿಯಂತಿದ್ದು ಸುಂದರವಾಗಿ ಕಾಣುವುದನ್ನು ನೋಡುತ್ತೇವೆ. ಒಟ್ಟಾರೆ ಈ ಶಿಲ್ಪಾಕೃತಿಯನ್ನು ಗಮನಸಿದರೆ ನಟರಾಜನು ನೃತ್ಯವನ್ನು ಮಾಡುತ್ತಿರುವಂತೆ ಕಾಣುತ್ತದೆ. ಒಟ್ಟಾರೆಯಾಗಿ ಈ ಶಿಲ್ಪಾಕೃತಿಯನ್ನು ವಿಭಿನ್ನವಾದಂತ ಶೈಲಿಯಿಂದ ರಚಿಸಿದ್ದಾರೆ.

### ೨೪. ಬಾಲ ಗಣೇಶ

ಈ ಶಿಲ್ಪವನ್ನು ಗೋಕಾಕ ತಾಲೂಕಿನ ಕೊಣ್ಣೂರು ಗ್ರಾಮದ ಕಾಡಪ್ಪ ಕುಂಬಾರರವರು ೫X೨೧/೨ ಅಡಿ ಅಳತೆಯಲ್ಲಿ ೨೦೧೧ರಲ್ಲಿ ರಚಿಸಿದ್ದಾರೆ.[೨೫] ಪ್ಲ್ಯಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚನೆ ಮಾಡಿದ್ದಾರೆ. ಇಲ್ಲಿ ಕಲಾವಿದನು ಅಂಗ ರಚನೆಗೆ ಹೆಚ್ಚು ಮಹತ್ವವನ್ನು ಕೊಟ್ಟಿದ್ದಾನೆ. ಗಣಪತಿಗೆ ನಾಲ್ಕು ಕೈಗಳಿದ್ದು ವಿವಿಧ ಆಯುಧಗಳನ್ನು ಹಿಡಿದಿದ್ದು ಮತ್ತು ಅಭಯ ಹಸ್ತವನ್ನು ರಚಿಸಿದ್ದು, ಕಮಲದ ಮೇಲೆ ಕುಳಿತಿದ್ದಾನೆ. ಇದರಲ್ಲಿ ಆಸನವನ್ನು ಗುರುತಿಸುವುದು ಕಷ್ಟಸಾಧ್ಯವಾಗಿದೆ. ಕಲಾವಿದನು ಗಣೇಶನನ್ನು ಬಾಲಕನಾಗಿಯೇ ರೂಪಿಸಿದ್ದಾನೆ. ಕೊರಳಲ್ಲಿ ಆಭರಣಗಳಿದ್ದು, ಕರಂಡ ಮಕುಟವನ್ನು ಹೊಂದಿದ್ದಾನೆ. ಪಕ್ಕದಲ್ಲಿ ಇಲಿಯನ್ನು ಚಿಕ್ಕದಾಗಿ ರಚಿಸಿದ್ದಾರೆ. ಇವನು ಮೂಷಿಕ ವಾಹನ ಎಂಬ ಸಂಕೇತವಾಗಿ ಚೈತನ್ಯಮಯವಾಗಿದೆ.

---

೨೪. ಈ ಶಿಲ್ಪವು ೨೦೧೦ರಲ್ಲಿ ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ವಸ್ತುಸಂಗ್ರಹಾಲಯದಲ್ಲಿದೆ.

೨೫. ಈ ಶಿಲ್ಪವನ್ನು ಗೋಕಾಕ ತಾಲೂಕಿನ ಕೊಣ್ಣೂರು ಗ್ರಾಮದ ಕಾಡಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

### ೨೫. ನಂದಿಯ ಮೇಲೆ ಕುಳಿತ ಗಣೇಶ

ಕಾಡಪ್ಪ ಕುಂಬಾರರವರು ೨½X೧½ ಅಡಿ ಅಳತೆಯಲ್ಲಿ ೨೦೦೯ರಲ್ಲಿ ಪ್ಲ್ಯಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚನೆಯಾಗಿದ್ದು ತರುಣನಾಗಿದ್ದಾನೆ.[೨೬] ಇಲ್ಲಿ ಗಣೇಶನು ಮಲಗಿದ ನಂದಿಯ ಮೇಲೆ ಕುಳಿತಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ನಾಲ್ಕು ಕೈಗಳಲ್ಲಿಯೂ ಆಯುಧಗಳನ್ನು ಹಿಡಿದಿದ್ದು, ತಂದೆಯ ವಾಹನವನ್ನು ಬಳಸಿಕೊಂಡಿದ್ದಾನೆ. ಕೊರಳಲ್ಲಿ ಹಾರಗಳಿದ್ದು ಕರಂಡ ಮುಕುಟವನ್ನು ಧರಿಸಿದ್ದಾನೆ. ಗಣೇಶನು ಏಕದಂತನಾಗಿದ್ದು ತನ್ನ ಸೊಂಡಿಯಲ್ಲಿ ದಂತವನ್ನು ಹಿಡಿದಿರುವುದು ವಿಶೇಷವಾಗಿದೆ. ನಂದಿಯ ಕಾಲ ಪಕ್ಕದಲ್ಲಿ ಇಲಿಯನ್ನು ರಚಿಸಿರುವುದರಿಂದ ಇಲ್ಲಿ ಗಣಪತಿಯು ಮೂಷಿಕ ವಾಹನನಾಗಿದ್ದಾನೆಂದು ಗೋಚರವಾಗುತ್ತದೆ. ಕಲಾವಿದನು ಎಷ್ಟೆ ಸೃಜನಶೀಲತೆಗೆ ತೆರೆದುಕೊಂಡರು. ಸಂಪ್ರದಾಯದ ಕಡೆಗೆ ಕೊಂಡೊಯ್ಯುತ್ತದೆ. ಈ ಶಿಲ್ಪವನ್ನು ಗೋಕಾಕ ತಾಲೂಕಿನ ಕೊಣ್ಣೂರು ಗ್ರಾಮದ ಕಾಡಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

### ೨೬. ಸೂರ್ಯಕಾಂತಿ ಮೇಲೆ ಕುಳಿತ ಗಣೇಶ

ಈ ಶಿಲ್ಪವನ್ನು ಪ್ರಕಾಶ ಲಕ್ಷ್ಮಣ ಕುಂಬಾರ ಅವರ ೨೦೧೧ರಲ್ಲಿ ಗಣೇಶೋತ್ಸವದ ಅಂಗವಾಗಿ ರಚನೆ ಮಾಡಿದ್ದು.[೨೭] ಕಲಾಕೃತಿಯಲ್ಲಿ ಗಣೇಶನು ಸೂರ್ಯಕಾಂತಿ ಹೂ ಮೇಲೆ ಉತ್ಕಟಿಕಾಸನದಲ್ಲಿ ಕುಳಿತಿದ್ದು, ಕಲಾವಿದನ ಸೃಜನಶೀಲತೆಯನ್ನು ಪ್ರತಿಬಿಂಬಿಸುತ್ತದೆ. ಇಲ್ಲಿ ಗಣೇಶನು ನಾಲ್ಕು ಭುಜಗಳನ್ನು ಹೊಂದಿದ್ದು ಅಂಕುಶ, ಪಾಶ, ಅಭಯ ಹಸ್ತ ಮತ್ತು ಒಂದು ಕೈಯಲ್ಲಿ ತಾವರೆ ಹೂವನ್ನು ಹಿಡಿದಿದ್ದಾನೆ. ಕೊರಳಲ್ಲಿ ಆಭರಣ ಮತ್ತು ಕರಂಡ ಮಕುಟವನ್ನು ಹೊಂದಿದ್ದಾನೆ. ಗಣೇಶನು ಏಕದಂತನಾಗಿದ್ದು, ಚೈತನ್ಯವನ್ನು ಸೂಚಿಸುವಂತಿದೆ. ಈ ಶಿಲ್ಪವು ಪ್ಲ್ಯಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚನೆಯಾಗಿದ್ದು ಹಳದಿ, ಬಿಳಿ, ಗುಲಾಬಿ ಬಣ್ಣಗಳಿಂದ ಕೂಡಿದೆ.

### ಪೆನ್ ಮಾಧ್ಯಮದಲ್ಲಿ ರಚನೆಯಾದ ಗಣೇಶನ ರೇಖಾಚಿತ್ರಗಳು

### ೨೭. ನಿಂತ ಗಣೇಶ

ಈ ರೇಖಾಚಿತ್ರದಲ್ಲಿ ಗಣೇಶನು ಸಮಭಂಗಿಯಲ್ಲಿ ನಿಂತಿದ್ದು, ನಾಲ್ಕು ಕೈಗಳನ್ನು ಹೊಂದಿದ್ದು, ನಾಲ್ಕು ಕೈಗಳಲ್ಲಿ ಆಯುಧವನ್ನು ಹಿಡಿದಿದ್ದಾನೆ.[೨೮] ಇಲ್ಲಿ ಗಣೇಶನಿಗೆ ನಡೆದಾಡುವುದಕ್ಕೆ ಕಷ್ಟವಾಗುವ ಹಾಗಿದೆ. ಗಣೇಶನಿಗೆ ವಯಸ್ಸಾದಂತೆ ಭಾಸವಾಗುತ್ತದೆ. ಗಣೇಶನು ಕುಬ್ಜನಾಗಿದ್ದು, ಉದರ ಬಂಧವನ್ನು ಹೊಂದಿದ್ದಾನೆ. ಮತ್ತು ಕರಂಡ ಮುಕುಟವಿದೆ. ರೇಖೆಗಳನ್ನು ನೋಡಿದಾಗ ಯಾವುದೇ ರೀತಿಯ ಉಲ್ಲಾಸವನ್ನು ತೋರಿಸುವುದಿಲ್ಲ. ಇಲ್ಲಿ ಗಣೇಶನಿಗೆ ವಯಸ್ಸಾದ್ದರಿಂದ ಕೈಯಲ್ಲಿ ಬಡಿಗೆಯನ್ನು ಹಿಡಿದು ನಡೆಯುತ್ತಿರುವ ಹಾಗಿದೆ. ಈ ರೇಖಾಚಿತ್ರವನ್ನು ನೋಡಿದಾಗ ಶಿಲ್ಪ ರಚಿಸುವುದಕ್ಕೆ ಪೂರ್ವಭಾವಿಯಾಗಿ ರಚಿಸಿಕೊಂಡಿರುವುದು ತಿಳಿದುಬರುತ್ತದೆ. ಈ ರೇಖಾಚಿತ್ರದಲ್ಲಿ ಇಲಿಯನ್ನು ಕಾಣಬಹುದು.

---

೨೬. ಈ ಶಿಲ್ಪವನ್ನು ಗೋಕಾಕ ತಾಲೂಕಿನ ಕೊಣ್ಣೂರು ಗ್ರಾಮದ ಕಾಡಪ್ಪ ಕುಂಬಾರ ಅವರ ಸಂಗ್ರಹದಲ್ಲಿದೆ.

೨೭. ಈ ಶಿಲ್ಪವನ್ನು ಪ್ರಕಾಶ ಲಕ್ಷ್ಮಣ ಕುಂಬಾರ ಅವರ ಸಂಗ್ರಹದಲ್ಲಿದೆ.

೨೮. ನಾಲ್ಕು ರೇಖಾಚಿತ್ರಗಳನ್ನು ಎಂ.ಫಿಲ್. ಮತ್ತು ಪಿಎಚ್.ಡಿ. ಶಂಶೋಧನಾ ಗ್ರಂಥಗಳಿಂದ ಆಯ್ದುಕೊಳ್ಳಲಾಗಿದೆ.

೧. ಈ ರೇಖಾಚಿತ್ರವನ್ನು ಶಿಲ್ಪವನ್ನು ರಚಿಸುವ ಪೂರ್ವದಲ್ಲಿ ರಚನೆ ಮಾಡಿರುವ ರೇಖಾಚಿತ್ರವಾಗಿದೆ. ಈ ಚಿತ್ರದಲ್ಲಿ ಗಣೇಶನು ಪೀಠದ ಮೇಲೆ ಕುಳಿತಿದ್ದು, ಕಿವಿಯಲ್ಲಿ ಆಭರಣಗಳು, ಕರಂಡ ಮುಕುಟವನ್ನು ಹೊಂದಿದೆ. ಈ ಚಿತ್ರದಲ್ಲಿ ರೇಖೆಗಳು ಸೊಗಸಾಗಿ ಮೂಡಿಬಂದಿದ್ದು ಕೈಗಳಲ್ಲಿ ಹಲವಾರು ಆಯುಧಗಳನ್ನು ಹಿಡಿದಿದ್ದಾನೆ. ಗಣಪತಿಯು ಮಹಾರಾಜ ಲೀಲಾಸನದಲ್ಲಿ ಕುಳಿತಿದ್ದು, ರೇಖೆಗಳು ಕಲಾವಿದನ ಸೂಕ್ಷ್ಮತೆ ಮತ್ತು ಶ್ರಮದಾನವನ್ನು ಸೂಚಿಸುತ್ತದೆ. ಗಣಪತಿಯು ಶಾಂತವಾದ ಭಾವನೆಯನ್ನು ಹೊಂದಿದ್ದು ರೇಖೆಗಳಿಂದ ರಚಿತವಾಗಿದೆ.

೨. ಈ ರೇಖಾಚಿತ್ರದಲ್ಲಿ ರೇಖೆಗಳು ದಪ್ಪವಾಗಿದ್ದು, ಸುಂದರವಾಗಿ ಮೂಡಿಬಂದಿದೆ. ಈ ಚಿತ್ರದಲ್ಲಿ ಗಣೇಶನು ಉಗ್ರರೂಪದಲ್ಲಿದ್ದು ಮಹಾರಾಜ ಲೀಲಾಸನದಲ್ಲಿ ಕುಳಿತಿದ್ದು, ನಾಲ್ಕು ಭುಜಗಳನ್ನು ಹೊಂದಿದೆ. ಇಲ್ಲಿ ಗಣೇಶನ ಎರಡೂ ದಂತಗಳು ಕಣ್ಣುಗಳ ಹಾಗೆ ಕಾಣುತ್ತವೆ. ಪ್ರಸಾರಿತ ಜಟವನ್ನು ಹೊಂದಿದ್ದು ಚಿಕ್ಕ ಚಿಕ್ಕ ಕಿವಿಗಳು ಕಂಡುಬರುತ್ತವೆ. ಯಜ್ಞೋಪವೀತವಿದ್ದಂತೆ ಕಂಡುಬರುತ್ತದೆ. ಗಣೇಶನು ವೃತ್ತಾಕಾರದ ಪೀಠದ ಮೇಲೆ ಕುಳಿತಿದ್ದು ಕಲಾವಿದನ ಸೃಜನಶೀಲತೆಯನ್ನು ಬಿಂಬಿಸುತ್ತದೆ ರೇಖೆಗಳು ಲಯದಿಂದ ಕೂಡಿವೆ.

೩. ಈ ರೇಖಾಚಿತ್ರದಲ್ಲಿ ಗಣೇಶನ ಚಿತ್ರವು ಅರ್ಧಭಾಗ ರಚನೆಯಾಗಿದ್ದು, ಈ ಚಿತ್ರವು ವಿಶೇಷವಾಗಿದೆ. ಈ ರೇಖಾಚಿತ್ರದಲ್ಲಿ ಗಣೇಶ ಸೊಂಡಿಲು ಬಹಳ ಉದ್ದವಾಗಿದ್ದು ಬಲಿಷ್ಟವಾದ ಕೈಗಳು, ಬಲಿಷ್ಟವಾದ ದೇಹ, ಯಜ್ಞೋಪವಿತ ಮತ್ತು ತೋಳಲ್ಲಿ ನಾಗಬಂಧ ಹೀಗೆ ರಚನೆಯಾಗಿದೆ. ಗಣೇಶನ ತಲೆ ಮಾತ್ರ ದೇಹಕ್ಕೆ ಚಿಕ್ಕದಾಗಿದ್ದು ವಿಶೇಷವೆನಿಸುತ್ತದೆ. ಇಲ್ಲಿ ಗಣೇಶನು ಪ್ರಸಾಂತ ಜಟವನ್ನು ಹೊಂದಿದ್ದು ಸೂಕ್ಷ್ಮವಾದ ರೇಖೆಗಳಿಂದ ಕೂಡಿದೆ.

**೨೮. ಗಂಜೀಪಾ ಕಲೆಯಲ್ಲಿ ಗಣೇಶ**

ಎಲ್ಲ ಕಲೆಗಳಲ್ಲಿ ರಚನೆಯಾದಂತೆ ಗಂಜೀಪಾ ಕಲೆಯಲ್ಲಿ ಗಣೇಶನ ಚಿತ್ರಗಳು ರಚನೆಯಾಗಿರುವುದು ಕಂಡುಬರುತ್ತದೆ.[೨೯] ಈ ಚಿತ್ರದಲ್ಲಿ ಗಣೇಶನು ಡೋಲು ಬಾರಿಸುತ್ತಿರುವ ದೃಶ್ಯವಾಗಿದೆ. ಗಣಪತಿಯು ಎರಡು ಕೈಗಳನ್ನು ಹೊಂದಿದ್ದು, ಡೋಲು ಬಾರಿಸುತ್ತಿರುವ ಭಂಗಿಯಲ್ಲಿವೆ. ಪದ್ಮಾಸನದಲ್ಲಿ ಕುಳಿತಿದ್ದು ಎರಡು ತೊಡೆಯ ಮೇಲೆ ಡೋಲು ಇಟ್ಟುಕೊಂಡು ಬಾರಿಸುವ ಹಾಗಿದೆ. ಈ ಚಿತ್ರದಲ್ಲಿ ಗಣೇಶನು ಕರಂಡ ಮಕುಟವನ್ನು ಹೊಂದಿದ್ದು ಕೊರಳಲ್ಲಿ ಆಭರಣಗಳು, ಕೈಗಡಗ, ತೋಳಬಂಧಿಗಳನ್ನು ಹೊಂದಿದ್ದು ಕಲಾವಿದ ಗಣೇಶನನ್ನು ಡೋಲು ಬಾರಿಸುವವನ ರೂಪದಲ್ಲಿ ಮತ್ತು ಸಂಗೀತದ ಹಿನ್ನೆಲೆಯಲ್ಲಿ ಕಂಡು ಸುಂದರವಾಗಿ ರಚಿಸಿದ್ದಾನೆ. ಇಲ್ಲಿ ಕೇಸರಿ, ಹಸಿರು, ಹಳದಿ, ಬಿಳಿ ವರ್ಣಗಳ ಮಿಶ್ರಣದಿಂದ ರಚಿತವಾಗಿದೆ.

---

೨೯. ಈ ಕಲಾಕೃತಿಯನ್ನು ಕರ್ನಾಟಕದ ಗಂಜೀಪಾ ಚಿತ್ರಕಲೆ ಎಂಬ ಸಂಶೋಧನಾ ಪ್ರಬಂಧದಿಂದ ತೆಗೆದುಕೊಳ್ಳಲಾಗಿದೆ.

೩೦. ಈ ಕಲಾಕೃತಿಯನ್ನು ಕರ್ನಾಟಕದ ಗಂಜೀಪಾ ಚಿತ್ರಕಲೆ ಎಂಬ ಸಂಶೋಧನಾ ಪ್ರಬಂಧದಿಂದ ತೆಗೆದುಕೊಳ್ಳಲಾಗಿದೆ.

### ೨೯. ಹೇರಂಬ ಗಣಪತಿ

ಈ ಕಲಾಕೃತಿಯು ಗಂಜೀಪಾ ಕಲೆಯಲ್ಲಿ ರಚನೆಯಾಗಿದ್ದು ಇಲ್ಲಿ ಗಣೇಶನಿಗೆ ಐದು ಮುಖಗಳಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ.[೩೦] ಆದರೆ ಗಣೇಶ ಸಿಂಹ ವಾಹನದ ಮೇಲೆ ಕುಳಿತುಕೊಳ್ಳುವ ಬದಲಾಗಿ ಸಿಂಹಾಸನದ ಮೇಲೆ ಕುಳಿತಿದ್ದಾನೆ. ಲಲಿತಾಸನದಲ್ಲಿ ಕುಳಿತಿದ್ದು, ಕೈಯಲ್ಲಿ ಪರಶು, ಮೋದಕ ಇನ್ನೂ ಯಾವುದೋ ಆಯುಧಗಳನ್ನು ಹಿಡಿದಂತೆ ಬಾಸವಾಗುತ್ತದೆ. ಇಲ್ಲಿ ಗಣೇಶನು ಆಭರಣಗಳನ್ನು ಹೊಂದಿದ್ದು ಕರಂಡ ಮುಕುಟವನ್ನು ಧರಿಸಿದ್ದಾನೆ. ಈ ಚಿತ್ರವು ಶ್ರೀಮಂತಿಕೆಯಿಂದ ಕೂಡಿದ್ದು, ಮುಗ್ದಲ ಪುರಾಣೋಕ್ತ ರಚನೆಯಾಗಿದೆ.

### ೩೦. ತ್ರಿಮುಖ ಗಣೇಶ

ಈ ಕಲಾಕೃತಿಯು ಗಂಜೀಪಾದಲ್ಲಿ ರಚನೆಯಾಗಿದೆ. ಈ ಕಲಾಕೃತಿಯು ಮುಗ್ದಲ ಪುರಾಣದ ಹಿನ್ನೆಲೆಯಲ್ಲಿ ರಚನೆಯಾಗಿದೆ.[೩೧] ಗಣೇಶನು ಮೂರು ಮುಖಗಳನ್ನು ಹೊಂದಿದ್ದು, ಆರು ಕೈಗಳಿವೆ. ಅಂಕುಶ, ದಂತ, ಪಾಶ ಮತ್ತು ಇನ್ನುಳಿದ ಕೈಗಳಲ್ಲಿ ಯಾವುದೇ ವಸ್ತುವನ್ನು ಹಿಡಿದಂತೆ ಕಂಡುಬರುತ್ತದೆ. ಇಲ್ಲಿ ಗಣೇಶನು ಕೊರಳಲ್ಲಿ ಆಭರಣಗಳನ್ನು ಹೊಂದಿದ್ದು, ಕರಂಡ ಮುಕುಟವನ್ನು ಹೊಂದಿದ್ದಾನೆ. ಇಲ್ಲಿ ಗಣೇಶನು ಸೂರ್ಯಕಾಂತಿಯ ಹೂ ಮೇಲೆ ಕುಳಿತಿರುವುದು ವಿಶೇಷವಾಗಿದೆ. ಈ ಗಣೇಶನನ್ನು ನೋಡಿದಾಗ ಕಲಾವಿದನನ್ನು ಪಾರಮಾರ್ಥ ಚಿಂತನೆಗೆ ಒಳಪಡಿಸುತ್ತದೆ. ಈ ಕಲಾಕೃತಿಯು ಚೈತನ್ಯಮಯವಾಗಿದೆ. ಈ ಚಿತ್ರವು ಗಂಜೀಪಾ ಚಿತ್ರಕಲೆಯಲ್ಲಿ ರಚನೆಯಾಗಿದ್ದು ಕೇಸರಿ, ಕೆಂಪು, ಹಸಿರು, ಕಪ್ಪು ಮತ್ತು ಬಿಳಿ ಮಿಶ್ರಿತ ಬಣ್ಣಗಳಿಂದ ರಚನೆಯಾಗಿದೆ.

### ೩೧. ಗೌರಿ ಗಣೇಶ

ಈ ಕಲಾಕೃತಿಯಲ್ಲಿ ಗಣೇಶನು ಬಾಲಕನಾಗಿದ್ದು, ಅವನ ತಾಯಿ ಗೌರಿಯು ಎಡಗೈಯಿಂದ ಎತ್ತಿ ಹಿಡಿದು ಅಗರ ಬತ್ತಿಗಳನ್ನು ತೋರಿಸುತ್ತಿರುವಂತೆ ಇಲ್ಲಿ ಗಣೇಶನಿಗೆ ನಾಲ್ಕು ಕೈಗಳಿದ್ದು, ಕೈಯಲ್ಲಿ ಆಯುಧಗಳನ್ನು ಹಿಡಿದಿದ್ದಾನೆ.[೩೨] ಶಿರಸ್ತ್ರವನ್ನು ಹೊಂದಿದ್ದಾನೆ. ಈ ಕಲಾಕೃತಿಯನ್ನು ಗಮನಿಸಿದಾಗ VASU 100 ಎಂಬ ಅಗರ ಬತ್ತಿಯನ್ನು ಈ ಕಲಾಕೃತಿ ಮೂಲಕ ಗಣೇಶನು ನಮಸ್ಕಾರ ಮುದ್ರೆಯನ್ನು ಹೊಂದಿದ್ದು, ಅಭಯ ಹಸ್ತವನ್ನು ತೋರಿದ್ದಾನೆ. ಒಟ್ಟಾರೆ ಈ ಕೃತಿಯು ಕಪ್ಪು, ಕೇಸರಿ, ಗುಲಾಬಿ ಮತ್ತು ಬಿಳಿ ಬಣ್ಣದ ಮಿಶ್ರಣದಿಂದ ರಚಿತವಾಗಿದೆ. ಗೌರಿಯೂ ಸಹ ಕೇಸರಿ ಕಪ್ಪು, ಗುಲಾಬಿ ಮತ್ತು ಬೀಲಿ ಬಣ್ಣಗಳ ಮಿಶ್ರಣದಿಂದ ರಚನೆಯಾಗಿದ್ದಾಳೆ. ಗೌರಿಯು ಗಣೇಶನನ್ನು ಪ್ರೀತಿಯಿಂದ ಕಾಣುತ್ತಿದ್ದಾಳೆ. ಈ ಕೃತಿಯು ವಾಣಿಜ್ಯದ ಹಿನ್ನೆಲೆಯಲ್ಲಿ ರಚನೆಯಾಗಿದೆ.

---

೩೧. ಈ ಕಲಾಕೃತಿಯನ್ನು ಕರ್ನಾಟಕದ ಗಂಜೀಪಾ ಚಿತ್ರಕಲೆ ಎಂಬ ಸಂಶೋಧನಾ ಪ್ರಬಂಧದಿಂದ ತೆಗೆದುಕೊಳ್ಳಲಾಗಿದೆ.

೩೨. -ಅದೇ-

### ೩೨. ಈಶ್ವರ ಲಿಂಗ ಗಣಪತಿ

ಈ ಕಲಾಕೃತಿಯಲ್ಲಿ ಈಶ್ವರ ಲಿಂಗವಿದ್ದು, ಲಿಂಗಕ್ಕೆ ಗಣಪತಿಯ ಸೊಂಡಿಲನ್ನು ಸೇರಿಸಿದ್ದು ಇಲ್ಲಿ ಲಿಂಗವೆಂದರೆ ಶಿವಲಿಂಗ. ಶಿವನಿಗೆ ಗಣೇಶನನ್ನು ಸೇರಿ ರಚಿಸಲಾಗಿದೆ.[೩೩] ಇಲ್ಲಿ ಗಣೇಶನು ಶಿವನ ಮಗ ಎಂದು ಒಂದು ಅರ್ಥದಲ್ಲಿ ಹೇಳುವುದಾದರೆ ಇನ್ನೊಂದು ಅರ್ಥದಲ್ಲಿ ಶಿವಲಿಂಗದ ಜೊತೆಗೆ ಗಣೇಶನು ಪೂಜೆಗೊಳ್ಳುವ ಸೂಚನೆಯನ್ನು ತಿಳಿಸುತ್ತದೆ. ಇಲ್ಲಿ ಗಣೇಶನಿಗೆ ದಾಸವಾಳದ ಹೂವೆ ಕಿರೀಟವಾಗಿದೆ. ಹೂವಿನ ಮೊಗ್ಗೆ ಕಿವಿಯಾಗಿದೆ. ಕಲಾವಿದನ ಕೈಯಲ್ಲಿ ಈಶ್ವರ ಲಿಂಗದಲ್ಲಿ ಗಣೇಶನನ್ನು ಜೋಡಣೆ ಮಾಡಿರುವುದು ಆಕರ್ಷಣೀಯವಾಗಿದೆ. ಈ ಕೃತಿಯಲ್ಲಿ ಕಣ್ಣುಗಳು ಆಕರ್ಷಕವಾಗಿ ಮೂಡಿಬಂದಿದ್ದು ಕೆಂಪು, ಗುಲಾಬಿ, ಕೇಸರಿ, ಹಸಿರು, ಬಿಳಿ ಬಣ್ಣಗಳು ಸಮ್ಮಿಶ್ರಣಗೊಂಡಿವೆ.

### ೩೩. ಗಣಪತಿ

ಈ ಕಲಾಕೃತಿಯಲ್ಲಿ ಗಣೇಶನು ಚೌಕಾಕಾರದ ಪೀಠದ ಮೇಲೆ ಕುಳಿತಿದ್ದು, ನಾಲ್ಕು ಭುಜಗಳನ್ನು ಹೊಂದಿದ್ದಾನೆ. ಮೂರು ಕೈಗಳಲ್ಲಿ ಆಯುಧಗಳನ್ನು ಹಿಡಿದಂತಿದ್ದು, ಒಂದು ಬಲಗೈಯನ್ನು ಅಭಯ ಹಸ್ತವಾಗಿದೆ.[೩೪] ಆ ಹಸ್ತದಲ್ಲಿ ರುದ್ರಾಕ್ಷಿ ಮಾಲೆಯನ್ನು ಹಿಡಿದುಕೊಂಡಿದ್ದು, ದೇಹವು ಸಣಕಲಾಗಿದೆ. ಇಲ್ಲಿ ವಿಶೇಷವೆನೆಂದರೆ ಜಪಮಾಲೆಯನ್ನು ಹಿಡಿದಿರುವುದರಿಂದ ಋಷಿಯ ರೂಪದಲ್ಲಿ ರಚಿಸಿರುವುದು ಒಂದು ವಿಶೇಷವಾಗಿದೆ. ಏಕೆಂದರೆ ಋಷಿಮುನಿಗಳು ಜಪ, ತಪ, ಹೋಮಗಳನ್ನು ಮಾಡುತ್ತಾರೆ. ಅವರು ಸಣಕಲಾಗಿರುತ್ತಾರೆ. ಆದ ಕಾರಣ ಇಲ್ಲಿ ಗಣೇಶನು ಸಣಕಲಾಗಿದ್ದು, ಜಪ ಮಾಡುತ್ತಿರುವ ಹಾಗಿದೆ. ಇಲ್ಲಿ ಗುಲಾಬಿ, ಕೆಂಪು, ಬಿಳಿ ಬಣ್ಣಗಳ ಮಿಶ್ರಣದಲ್ಲಿವೆ. ಅವನ ಮುಂದೆ ತೆರೆದಿರುವ ಗ್ರಂಥವು ಸಹ ರಚನೆಯಾಗಿದೆ. ಒಟ್ಟಾರೆಯಾಗಿ ತತ್ವಜ್ಞಾನಿಯಾಗಿರುವುದು ಕಂಡುಬರುತ್ತದೆ.

### ೩೪. ಶಿವಾಜಿ ರೂಪದಲ್ಲಿ ಗಣೇಶ

ಈ ಕಲಾಕೃತಿಯಲ್ಲಿ ಗಣಪತಿಯನ್ನು ಶಿವಾಜಿ ರೂಪದಲ್ಲಿ ರಚಿಸಿರುವುದು ಸೋಜಿಗವೆನಿಸುತ್ತದೆ. ಈ ಕಲಾಕೃತಿಯ ದೇಹಕ್ಕೆ ಗಣೇಶನ ತಲೆಯನ್ನು ಜೋಡಿಸಲಾಗಿದೆ.[೩೫] ಇಲ್ಲಿ ಗಣೇಶನು ಶಿವಾಜಿಯ ಹಾಗೆ ಖಡ್ಗವನ್ನು ಹಿಡಿದು ವೀರಭಾವದಲ್ಲಿ ನಿಂತಿದ್ದಾನೆ. ಧರಿಸಿರುವ ವಸ್ತ್ರಗಳು, ಹಿಡಿದರುವ ಖಡ್ಗ ವೀರಭಾವದ ಮುಖವನ್ನು ಗಮನಿಸಿದಾಗ ಕಲಾವಿದನು ಗಣೇಶನನ್ನು ಶಿವಾಜಿ ರೂಪದಲ್ಲಿ ಕಂಡಿರುವುದು ಸೃಜಶೀಲತೆಯಿಂದ ಮರೆಯುತ್ತದೆ. ಹೀಗೆ ಗಣೇಶನನ್ನು ಬಾಲಗಂಗಾಧರ ತಿಲಕ ವಿವಿಧ ಆಟಗಳಿಗೆ, ವಿವಿಧ ವಾಹನವನ್ನು ಸೃಷ್ಟಿಸುವುದು ಅದರ ಜೊತೆಗೆ ವಿವಿಧ ಆಯುಧಗಳನ್ನು ರಚಿಸುವುದು ಒಂದು ವಿಶೇಷವಾಗಿದೆ. ಈ ಕಲಾಕೃತಿಯು ಒಂದು ಹೋರಾಟದ ಸನ್ನಿವೇಶವನ್ನು ಸೂಚಿಸುತ್ತದೆ. ಅವನ ಪಕ್ಕದಲ್ಲಿ ಇಲಿಯನ್ನು ರಚಿಸಲಾಗಿದೆ.

---

೩೩. –ಅದೇ–

೩೪. ಈ ಕಲಾಕೃತಿಗಳು ಸಂಶೋಧನಾ ಕಿರುಪ್ರಬಂಧದಿಂದ ಆಯ್ದುಕೊಳ್ಳಲಾಗಿದೆ.

೩೫. ಈ ಕಲಾಕೃತಿಗಳು ಸಂಶೋಧನಾ ಕಿರುಪ್ರಬಂಧದಿಂದ ಆಯ್ದುಕೊಳ್ಳಲಾಗಿದೆ.

### ೩೫. ಗಣೇಶನ ವಿವಿಧ ರೂಪಗಳು

ಈ ಕಲಾಕೃತಿಯಲ್ಲಿ ಗಣೇಶನ ವಿವಿಧ ರೀತಿಯ ಭಂಗಿಗಳಲ್ಲಿ, ವಿವಿಧ ರೀತಿಯ ಆಕಾರಗಳಿಂದ ಚಿತ್ರಿಸಿದ್ದು, ಮಧ್ಯದಲ್ಲಿನ ಗಣಪತಿಯು ಬಲಭಾಗಕ್ಕೆ ಮುಖವನ್ನು ಮಾಡಿ ಕುಳಿತಿದ್ದು ಚೂಪಾದ ದಂತ, ದೊಡ್ಡ ಗಾತ್ರದಿಂದ ಕೂಡಿದ ಸುಂದರವಾದ ಕಿವಿಯನ್ನು ಕಾಣಬಹುದು.[೩೬] ಗಣಪನ ನೆತ್ತಿಯ ಮೇಲೆ ಕುಂಕುಮ, ಸುಂದರವಾದ ಕಣ್ಣನ್ನು ಹೊಂದಿದ್ದು ತನ್ನ ಎಡಗೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದಿದ್ದು, ಬಲಭಾಗದ ಕೈಯಲ್ಲಿ ಪರಶುವನ್ನು ಹಿಡಿದಿರುವುದನ್ನು ಕಾಣುತ್ತೇವೆ. ಹೊಟ್ಟೆಯ ಭಾಗಕ್ಕೆ ಉದರಬಂಧವನ್ನು ಸುತ್ತಿಕೊಂಡಿದ್ದು ಮಧ್ಯಭಾಗದಲ್ಲಿ ಮಣಿಗಳಂತೆ ರಚಿಸಿದ್ದಾರೆ. ತನ್ನ ಎರಡು ಕಾಲುಗಳನ್ನು ಮಡಚಿಕೊಂಡು ಕುಳಿತ ಗಣೇಶನನ್ನು ನೋಡಿದರೆ ಎಲ್ಲಾ ಗಣಗಳಿಗೆ ಅಧಿಪತಿಯಾಗಿ ಇರುವಂತ ಸಂದರ್ಭವನ್ನು ಸೃಷ್ಟಿಸುತ್ತದೆ. ಗಣಪತಿಯ ಎಡ ಮತ್ತು ಬಲಭಾಗದಲ್ಲಿ ದ್ವಾರಪಾಲಕರಂತೆ ನಿಂತುಕೊಂಡಿದ್ದು, ಇಬ್ಬರು ಗಣಪತಿಗಳು ಕೈಯಲ್ಲಿ ಬಡಿಗೆಯನ್ನು ಹಿಡಿದು ನಿಂತಿರುವುದನ್ನು ಕಾಣುತ್ತೇವೆ. ಹಿನ್ನೆಲೆಯಲ್ಲಿ ವಿವಿಧ ಬಣ್ಣಗಳಿಂದ ಮೈವಳಿಕೆಯನ್ನು ತೆಗೆದಿರುವುದನ್ನು ಕಾಣುತ್ತೇವೆ. ಮೇಲ್ಭಾಗದ ಮಧ್ಯದಲ್ಲಿ ಅರಳಿನಿಂತ ಹೂವಿನಂತೆ ರಚಿಸಿದ್ದು, ಎಡ ಮತ್ತು ಬಲ ಭಾಗದಲ್ಲಿ ರೆಕ್ಕೆ ಉಳ್ಳಂತಹ ಗಣಪತಿಗಳು ತನ್ನ ಕೈಗಳಲ್ಲಿ ಹಾರವನ್ನು ಹಿಡಿದುಕೊಂಡು ಕುಳಿತಿರುವುದನ್ನು ಕಾಣಬಹುದು.

ಈ ಕೃತಿಯು ಕೆಳಭಾಗದಲ್ಲಿ ಕುಬ್ಜ ಗಣಪತಿಗಳು ಎರಡು ಕಡೆಗಳಲ್ಲಿ ತಲಾ ನಾಲ್ಕರಂತೆ ಕುಳಿತಿದ್ದು, ಎಡ ಮತ್ತು ಬಲಭಾಗದ ಇಬ್ಬರು ಕುಬ್ಜ ಗಣಪತಿಗಳು ಮೋದಕಗಳನ್ನು ಹಿಡಿದಿದ್ದು, ಮತ್ತಿಬ್ಬರೂ ಗಣಪತಿಯರು ಡೊಳ್ಳನ್ನು ಬಾರಿಸುತ್ತಿದ್ದು, ಮತ್ತಿಬ್ಬರು ಕುಳಿತು ಮೋದಕಗಳನ್ನು ಹಿಡಿದಿರುವುದನ್ನು ಕಾಣಬಹುದು. ಮಧ್ಯಭಾಗದಲ್ಲಿ ಎರಡು ಇಲಿಗಳನ್ನು ರಚಿಸಿದ್ದು ಅವೆರಡೂ ಸಹ ಮುಂದಿನ ಕಾಲುಗಳಲ್ಲಿ ಮೋದಕವನ್ನು ಹಿಡಿದು ಕುಳಿತಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಕಲಾಕೃತಿಯು ಉತ್ತಮವಾಗಿ ಮೂಡಿಬಂದಿದೆ. ಇಲ್ಲಿ ಕೆಂಪು, ಹಳದಿ, ಕಪ್ಪು ಬಣ್ಣಗಳಿಂದ ಮೈವಳಿಕೆಯನ್ನು ತೆಗೆದಿರುವುದು ಕಂಡುಬರುತ್ತದೆ.

### ೩೬. ಕುಳಿತಿರುವ ಗಣೇಶ

ಈ ಕಲಾಕೃತಿಯಲ್ಲಿ ಕುಳಿತಿರುವ ಗಣೇಶನನ್ನು ಕಾಣಬಹುದು.[೩೭]. ಇಲ್ಲಿ ಮೈಬಣ್ಣವನ್ನು ಬಿಳಿಯ ಬಣ್ಣದಿಂದ ರಚಿಸಿದ್ದು, ಸುಂದರವಾದ ಕಣ್ಣು, ಅರ್ಧಚಂದ್ರನಂತಿರುವ ಹುಬ್ಬು, ಹಣೆಗೆ ವಿಭೂತಿ ಪಟ್ಟಿ, ಮುರಿದ ದಂತ, ಸೊಂಡಿಲ ಮೇಲೆ ವಿನ್ಯಾಸ, ದೊಡ್ಡ ಗಾತ್ರದ ಕಿವಿಗಳನ್ನು ಹೊಂದಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ಅಂಕುಶ, ಅಭಯ ಹಸ್ತ, ಎಡಗೈಯಲ್ಲಿ ಪಾಶ, ಮೋದಕಗಳನ್ನು ಹಿಡಿದಿದ್ದು, ತನ್ನ ಹೊಟ್ಟೆಗೆ ನಾಗಬಂಧವನ್ನು ಸುತ್ತಿಕೊಂಡಿದ್ದು, ಕೊರಳಿಗೆ ಹೂವಿನ ಹಾರವನ್ನು ತೊಟ್ಟಿದ್ದಾನೆ. ಕರಂಡ ಮಕುಟದ ಕಿರೀಟವನ್ನು ಹೊಂದಿದ್ದು, ವಿವಿಧ

---

೩೬. ಈ ಕಲಾಕೃತಿಯು ಬಾದಾಮಿ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ವಸ್ತುಸಂಗ್ರಹಾಲದಲ್ಲಿದೆ.

೩೭. ಈ ಕಲಾಕೃತಿಯನ್ನು ಎಂ.ಫಿಲ್. ಸಂಶೋಧನಾ ಕಿರುಪ್ರಬಂಧದಿಂದ ಆಯ್ದುಕೊಳ್ಳಲಾಗಿದೆ.

ವಿನ್ಯಾಸದಿಂದ ಕೂಡಿದೆ. ಗಣಪತಿಯು ತನ್ನ ಸೊಂಟಕ್ಕೆ ಕೆಂಪು ಬಣ್ಣದ ಅಂಚಿನಿಂದ ಕೂಡಿದ ಹಳದಿ ಬಣ್ಣದ ಬಟ್ಟೆಯನ್ನು ತೊಟ್ಟಿದ್ದು, ಕಾಲಿಗೆ ಕಾಲಗಡಗ ಹಾಕಿರುವುದನ್ನು ಕಾಣುತ್ತೇವೆ. ಬಲಗಾಲನ್ನು ಕೆಳಗೆ ಬಿಟ್ಟು, ಎಡಗಾಲನ್ನು ಬಲಗಾಲಿನ ಮೊಣಕಾಲಿನ ಮೇಲೆ ಇಟ್ಟುಕೊಂಡಿದ್ದು, ಸಿಂಹಾಸನದ ಮೇಲೆ ಕುಳಿತ ಗಣೇಶನ ಹಿಂದೆ ಪ್ರಭಾವಳಿಯನ್ನು ಅತಿ ಸುಂದರವಾಗಿ ರಚಿಸಿದ್ದಾರೆ. ಅದರ ಮೇಲಿನ ತುದಿಗೆ ಕೀರ್ತಿ ಮುಖವನ್ನು ರಚಿಸಿದ್ದು, ದೊಡ್ಡ ದೊಡ್ಡ ಕಣ್ಣುಗಳನ್ನು ಹೊಂದಿದ್ದು ಕಾಣಬಹುದು. ಹಿನ್ನೆಲೆಯಲ್ಲಿ ಹಸಿರು, ಕೆಂಪು, ನೀಲಿ ಮಿಶ್ರಿತ ಬಣ್ಣಗಳಿಂದ ಲೇಪಿಸಿದ್ದಾರೆ. ಒಟ್ಟಾರೆಯಾಗಿ ನೋಡುಗರನ್ನು ಆಕರ್ಷಿಸುತ್ತದೆ.

### ೩.೭. ಕಮಲದ ಮೇಲೆ ಕುಳಿತ ಗಣೇಶ

ಈ ಕಲಾಕೃತಿಯಲ್ಲಿ ಗಣೇಶನು ಕಮಲದ ಮೇಲೆ ಕುಳಿತಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಮೇಲಿನ ಬಲಗೈಯಲ್ಲಿ ಪರಶು, ಎಡಗೈಯಲ್ಲಿ ಹೂ ಮತ್ತು ಪಾಶ, ಕೆಳಗಿನ ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಮೋದಕ ಬುಟ್ಟಿಯನ್ನು ಹಿಡಿದುಕೊಂಡಿದ್ದು, ಕೊರಳಲ್ಲಿ ಆಭರಣ ಮತ್ತು ಹೂ ಮಾಲೆಗಳನ್ನು ಹಾಕಿಕೊಂಡಿದ್ದಾನೆ.[೩೮] ಉದರಕ್ಕೆ ನಾಗಬಂಧವನ್ನು ಹೊಂದಿದ್ದು, ಕರಂಡ ಮುಕುಟದಾರಿಯಾಗಿದ್ದಾನೆ. ಹಿಂದೆ ಸುಂದರವಾದ ಪ್ರಭಾವಳಿ ಇದೆ. ಅವನ ಪಾದದ ಮುಂದೆ ಪೂಜಾ ಸಾಮಾಗ್ರಿಯನ್ನಿಟ್ಟಿದ್ದು ಮನೋಹರವಾಗಿದೆ. ಆದರೆ ಅವನು ಸೊಂಡಿಲಲ್ಲಿ ಹಿಡಿದ ರತ್ನ ಕುಂಭವನ್ನು ನೋಡಿದಾಗ ಶ್ರೀಮಂತಿಕೆಯ ಸಂಕೇತ ಮತ್ತು ಪೂಜೆಗೊಳ್ಳುತ್ತಿರುವ ಸಂಕೇತವನ್ನು ಸೂಚಿಸುತ್ತದೆ. ಈ ಕಲಾಕೃತಿಯಲ್ಲಿ ಇನ್ನೊಂದು ವಿಶೇಷವೇನೆಂದರೆ ಕಮಲವು ನೀರಿನಲ್ಲಿರುವ ಹಾಗೆ ಕಂಡುಬಂದಿದ್ದು, ಪೂಜಾ ಸಾಮಗ್ರಿಗಳು ಅದರ ಎಲೆಗಳ ಮೇಲಿವೆ. ಗಣೇಶನ ವಾಹನವಾದ ಇಲಿಯೂ ಕಮಲದ ಒಂದು ಪೊಕಳೆಯ ಮೇಲಿದೆ. ಒಟ್ಟಾರೆಯಾಗಿ ಈ ಚಿತ್ರದಲ್ಲಿ ಬಿಳಿ, ಕೆಂಪು, ಕಪ್ಪು, ಹಸಿರು, ಚಿನ್ನದ ಬಣ್ಣಗಳು ಬಳಕೆಯಾಗಿವೆ. ಒಟ್ಟಾರೆಯಾಗಿ ಈ ಕೃತಿಯನ್ನು ನೋಡಿದಾಗ ಚೈತನ್ಯವನ್ನು ತೋರಿಸುವ ಹಾಗಿದೆ. ಇಲ್ಲಿ ಕಲಾವಿದನ ಕಲ್ಪನೆಯೇ ಮುಖ್ಯವಾಗಿದೆ.

### ೩.೮. ಚಂದ್ರನ ಮೇಲೆ ಕುಳಿತ ಗಣೇಶ

ಈ ಕಲಾಕೃತಿಯನ್ನು ಅಂತರ್ಜಾಲದಿಂದ ಪಡೆದುಕೊಳ್ಳಲಾಗಿದೆ[೩೯] ಈ ಕಲಾಕೃತಿಯಲ್ಲಿ ಗಣೇಶನು ಚಂದ್ರನ ಮೇಲೆ ಗಣೇಶನು ಕುಳಿತಿದ್ದು ಒಂದು ವಿಶೇಷವಾಗಿದೆ. ಈ ಕೃತಿಯಲ್ಲಿ ಗಣೇಶನು ಕೃಷ್ಣನ ರೂಪದಲ್ಲಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಮೇಲಿನ ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಪಾಶ, ಕೆಳಗಿನ ಬಲಗೈಯಲ್ಲಿ ಕುಳುಲುವಿನ ಆಕಾರವನ್ನು ಹೋಲುತ್ತದೆ.

---

೩೮ ಈ ಕಲಾಕೃತಿಯನ್ನು ಎಂ.ಫಿಲ್ ಸಂಶೋಧನಾ ಕಿರುಪ್ರಬಂಧದಿಂದ ಆಯ್ದುಕೊಳ್ಳಲಾಗಿದೆ.

೩೯ ಅಂತರ್ಜಾಲದಿಂದ ಈ ಕಲಾಕೃತಿಯನ್ನು ಪಡೆದುಕೊಳ್ಳಲಾಗಿದೆ.

ಪಲ್ಲವ ಹಸ್ತವನ್ನು ಹೋಲುತ್ತದೆ. ಕೊರಳಲ್ಲಿ ಆಭರಣಗಳನ್ನು ಮತ್ತು ಕೈ-ಕಾಲುಗಳಲ್ಲಿ ಆಭರಣಗಳನ್ನು ಧರಿಸಿದ್ದಾನೆ. ಅರ್ಧಪರ್ಯಂಕಾಸದಲ್ಲಿ ಕುಳಿತಿದ್ದು ಸಿರಸ್ತ್ರಕ ಮಕುಟವನ್ನು ಹೊಂದಿದ್ದಾನೆ. ಏಕದಂತನಾಗಿದ್ದು, ಇಲ್ಲಿ ಗಣೇಶನಲು ಆಕಾಶದಲ್ಲಿರುವ ಚಂದ್ರನ ಮೇಲೆ ಕುಳಿತಿದ್ದಾನೆ. ಬಾಲಗಣಪತಿಯ ಹಾಗೆ ಕಂಡುಬರುತ್ತಾನೆ. ಗುಲಾಬಿ, ಹಳದಿ, ಬಿಳಿ ಮಿಶ್ರಿತ ಬಣ್ಣಗಳನ್ನು ಹೊಂದಿದ್ದಾನೆ.

### ೩೯. ಸಾಯಿಬಾಬಾ ರೂಪದಲ್ಲಿ ಗಣೇಶ

ಈ ಕಲಾಕೃತಿಯನ್ನು ಸಹ ಅಂತರ್ಜಾಲದಿಂದ ತಗೆದುಕೊಳ್ಳಲಾಗಿದೆ[೪೦] ಈ ಕಲಾಕೃತಿಯಲ್ಲಿ ಗಣೇಶನನ್ನು ಸಾಯಿಬಾಬಾನ ರೂಪದಲ್ಲಿ ರಚನೆಯಾಗಿದ್ದು, ಕಮಲದ ಮೇಲೆ ಕುಳಿತುಕೊಂಡಿದ್ದಾನೆ. ಕಲಾವಿದನ ಕಣ್ಣಿಗೆ ಸಾಯಿ ರೂಪದಲ್ಲಿ ಕಂಡಿದ್ದು ವಿಶೇಷವಾಗಿದೆ. ಇಲ್ಲಿ ಗಣೇಶನಿಗೆ ನಾಲ್ಕು ಕೈಗಳಿದ್ದು, ಶಕ್ತಿ, ಪಾಶ, ಅಭಯ ಹಸ್ತ, ಮೋದಕಗಳನ್ನು ಹಿಡಿದಿದ್ದು, ಉತ್ಕಟಿಕಾಸನದಲ್ಲಿ ಕುಳಿತಿದ್ದಾನೆ. ಕೊರಳಲ್ಲಿ ಆಭರಣಗಳನ್ನು ಧರಿಸಿದ್ದು ಅವನ ಸೊಂಡಿಲು ಮೋದಕ ಬುಟ್ಟಿಗೆ ತಲುಪಿದೆ. ಇಲ್ಲಿ ಗಣೇಶನು ಏಕದಂತನಾಗಿದ್ದು, ಸಮಕಾಲೀನತೆಯನ್ನು ಸೂಚಿಸುತ್ತದೆ. ಅವನ ಹಿಂದಿನಿಂದ ಬೆಳಕು ಬೀರಿದಂತೆ ಕಂಡುಬರುತ್ತದೆ. ಮತ್ತು ಅವನ ಕಾಲಿನ ಪಕ್ಕದಲ್ಲಿ ಮೂಷಿಕ ವಾಹನವನ್ನು ರಚಿಸಲಾಗಿದೆ.

### ೪೦. ಕಿನ್ನಾಳದ ಗಣಪತಿ

ಈ ಕಲಾಕೃತಿಯನ್ನು ೨೦೧೧ರಲ್ಲಿ ಕಿನ್ನಾಳದ ಅಣ್ಣಪ್ಪ ಚಿತ್ರಗಾರ ಎಂಬುವರು ರಚಿಸಿದ್ದು ಎರಡು ಅಡಿ ಅಷ್ಟಭುಜಾಕೃತಿಯುಳ್ಳ ತಟ್ಟೆಯ ಮಧ್ಯದಲ್ಲಿ ಹತ್ತು ಇಂಚು ಅಳತೆಯ ವೃತ್ತಾಕರದ ಅಳತೆಯಲ್ಲಿ ರಚನೆಯಾಗಿದೆ[೪೧] ಈ ಕಲಾಕೃತಿಯಲ್ಲಿ ಕುಳಿತಿರುವ ಗಣಪತಿಯನ್ನು ನೋಡಬಹುದು. ಸುಂದರವಾದ ಕಣ್ಣುಗಳು, ದೊಡ್ಡ ದೊಡ್ಡ ಕಿವಿಗಳನ್ನು ಹೊಂದಿರುವ, ತನ್ನ ಸೊಂಡಿಲನ್ನು ಎಡಭಾಗಕ್ಕೆ ತಿರುಗಿಸಿಕೊಂಡಿದ್ದು, ಸರಳವಾದಂತಹ ಕಿರೀಟವನ್ನು ಧರಿಸಿದ್ದಾನೆ. ಕೊರಳಿಗೆ ಸುಂದರವಾದ ವಿನ್ಯಾಸದಿಂದ ಕೂಡಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಬಲಗೈಗಳಲ್ಲಿ ಒಂದರಲ್ಲಿ ಪಾಶ ಮತ್ತೊಂದರಲ್ಲಿ ಅಭಯ ಹಸ್ತ ಮಾಡಿಕೊಂಡು ಕುಳಿತಿರುವುದನ್ನು ನೋಡುತ್ತೇವೆ. ಮತ್ತೊಂದು ಕಡೆ ಶಂಕು ಮತ್ತು ಮೋದಕವನ್ನು ಹಿಡಿದಿದ್ದು ನಾವು ಕಾಣಬಹುದಾಗಿದೆ. ಸೊಂಟಕ್ಕೆ ಬಿಳಿ ಮತ್ತು ಅಂಚನ್ನು, ಹಳದಿ ಬಣ್ಣದಿಂದ ರಚಿಸಿದ್ದಾರೆ. ಹಿಂಭಾಗದಲ್ಲಿ ಕೆಂಪು ಬಣ್ಣದ ಲೇಪನವನ್ನು ಮಾಡಿದ್ದಾರೆ. ಒಟ್ಟಾರೆಯಾಗಿ ಇಂತಹ ಗಣಪತಿಯ ಚಿತ್ರವನ್ನು ಕಿನ್ನಾಳ ಕಲೆಯಲ್ಲಿ ಬಳಸಿಕೊಂಡು ಕಲಾಕೃತಿಯು ರಚನೆ ಮಾಡುವುದರಿಂದಾಗಿ ಕಿನ್ನಾಳ ಕಲೆಗೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿದಂತಾಗಿದೆ.

---

೪೦ ಈ ಕಲಾಕೃತಿಯನ್ನು ಅಂತರ್‌ಜಾಲದಿಂದ ಪಡೆದುಕೊಳ್ಳಲಾಗಿದೆ.
೪೧ ಈ ಕಲಾಕೃತಿಯು ಕಿನ್ನಾಳದ ಅಣ್ಣಪ್ಪ ಚಿತ್ರಗಾರ ಎಂಬುವವರ ಸಂಗ್ರಹದಲ್ಲಿದೆ.

### ೪೧. ನಟರಾಜನ ಶಿಲ್ಪದ ಪಕ್ಕದಲ್ಲಿರುವ ಗಣಪತಿ

ಈ ಶಿಲ್ಪವು ಮಿಶ್ರಮಾಧ್ಯಮದಲ್ಲಿ ರಚನೆಯಾಗಿದ್ದು, ಈ ಭಿತ್ತಿಶಿಲ್ಪದಲ್ಲಿ ಗಣಪತಿಯು ನಟರಾಜನ ಶಿಲ್ಪದ ಪಕ್ಕದಲ್ಲಿ ಸಣ್ಣ ಪ್ರಮಾಣದಲ್ಲಿ ಇರುವುದನ್ನು ನೋಡುತ್ತೇವೆ[೪೨] ಇಲ್ಲಿ ಗಣಪತಿಯು ನಿಂತಿದ್ದು, ತನ್ನ ಸೊಂಡಿಲನ್ನು ಬಲಕ್ಕೆ ಮಾಡಿಕೊಂಡು ಸುಂದರವಾದ ಕಿವಿಗಳನ್ನು ಹೊಂದಿದ್ದು, ತನ್ನ ಎಡಗೈಯಲ್ಲಿ ಶಂಖು ಹಿಡಿದು ಊದುತ್ತಿರುವುದನ್ನು ಕಾಣಬಹುದು. ಮುರಿದ ಮತ್ತು ಚಿಕ್ಕ ಗಾತ್ರದ ದಂತ, ದೊಡ್ಡ ಗಾತ್ರದ ಹೊಟ್ಟೆಯನ್ನು ಮತ್ತು ತನ್ನ ಸೊಂಟಕ್ಕೆ ಲಂಗೋಟಿಯನ್ನು ಸುತ್ತಿಕೊಂಡಿದ್ದು ಇಲ್ಲಿ ವಿಶೇಷವೆನೆಂದರೆ ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿಯೂ ಕುಳಿತಿರುವಂತಹ ಗಣಪತಿಯು ಇಲ್ಲಿ ನಿಂತಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಎಲ್ಲಾ ಗಣಪತಿ ಶಿಲ್ಪ ಚಿತ್ರಗಳಿಗಿಂತ ಈ ಭಿತ್ತಿಶಿಲ್ಪವು ಭಿನ್ನವಾಗಿ ರಚನೆಗೊಂಡಿದೆ.

### ೪೨. ಭಿತ್ತಿಯಲ್ಲಿ ಗಣೇಶ

ಈ ಶಿಲ್ಪವು ೨x೨ ಅಳತೆಯಲ್ಲಿ ರಚನೆಯಾಗಿದ್ದು ಈ ಭಿತ್ತಿಶಿಲ್ಪವನ್ನು ಗುಲಬರ್ಗಾದ ದಿ ಐಡಿಯಲ್ ಫೈನ್‌ಆರ್ಟ್ ಕಾಲೇಜಿನ ಆವರ್ಣದಲ್ಲಿ ಕಾಲೇಜಿನ ವಿದ್ಯಾರ್ಥಿಗಳು೨೦೦೮ರಲ್ಲಿ ರಚಿಸಿದ್ದಾರೆ. ಗೋಡೆಯ ಮೇಲೆ ಸಿಮೆಂಟ್‌ನಿಂದ ರಚನೆಯಾಗಿದೆ[೪೩] ಉಬ್ಬು ಶಿಲ್ಪವಾಗಿದ್ದು ಸೃಜನಶೀಲತೆಯಿಂದ ಕೂಡಿದೆ. ಅಗಲವಾದ ಕಿವಿಗಳು, ಮರದ ಎಲೆಯ ಆಕಾರದಲ್ಲಿವೆ. ದೊಡ್ಡದಾದ ಸೊಂಡಿಲು, ಹಣೆಯ ಮೇಲೆ ತಿರುಪತಿಯ ನಾಮದಂತಿದೆ. ಅಭಯ ಹಸ್ತವನ್ನು ಸೂಚಿಸುವಂತಿದೆ. ದೊಡ್ಡದಾದ ಕಣ್ಣುಗಳು, ಸುಖಾಸನದಲ್ಲಿದೆ. ಕಲಾವಿದನು ಹೆಚ್ಚು ಸೃಜನಶೀಲತೆಗೆ ಮಹತ್ವ ಕೊಟ್ಟಿರುವಂತಾಗಿದೆ. ಇದು ಆಧುನಿಕ ಭಿತ್ತಿಶಿಲ್ಪವಾಗಿದೆ.

---

೪೨ ಈ ಕಲಾಕೃತಿಯ ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದ ಸಂಗ್ರಹದಲ್ಲಿದೆ.

೪೩ ಈ ಕಲಾಕೃತಿಯು ಗುಲಬರ್ಗಾದ ಡಿ ಐಡಿಯಲ್ ಫೈನ್‌ಆರ್ಟ್ ಕಾಲೇಜಿನ ಸಂಗ್ರಹದಲ್ಲಿದೆ.



೦೧. ಶಯನ ಗಣಪತಿ ಶಿಲ್ಪ



೦೨. ನಿಂತ ಗಣೇಶ



೦೩. ಬಾಗಿಲ ಮೇಲೆ ರಚನೆಯಾದ ಗಣೇಶ ಶಿಲ್ಪ



೦೪. ಗಣೇಶ ಶಿಲ್ಪ



೦೫. ಗಣೇಶ ಶಿಲ್ಪ



೦೬. ಕುಳಿತ ಗಣೇಶ

ಹಂಪಿಯ ವಿರೂಪಾಕ್ಷೇಶ್ವರ ದೇವಸ್ಥಾನದ ರಥದ ಮೇಲಿನ ಶಿಲ್ಪಗಳು



೦೧



೦೨



೦೮. ಸಿಂಹಾಸನದ ಮೇಲೆ ಕುಳಿತ ಗಣೇಶ



೦೯. ಕುಳಿತ ಗಣೇಶ



೧೦. ನಂಬಿಕೆಯ ಹಿನ್ನೆಲೆಯಲ್ಲಿ ರಚನೆಯಾದ ಗಣೇಶ



೧೧. ನೃತ್ಯ ಗಣೇಶ



೧೨. ಕ್ರಿಕೇಟ್ ಆಡುತ್ತಿರುವ ಗಣೇಶ



೧೩. ಸಿಂಹಾಸನದ ಮೇಲೆ ಕುಳಿತ ಗಣೇಶ



೧೪. ಲೋಹದ ಗಣೇಶ ಶಿಲ್ಪ



೧೫. ಕುಳಿತಿರುವ ಗಣೇಶ ಶಿಲ್ಪ



೧೬. ಲೋಹ ಮಾಧ್ಯಮದಲ್ಲಿ ಗಣೇಶ ಶಿಲ್ಪ



೧೭. ನಾಗರ ಪಣಿಯ ಮೇಲೆ ಕುಳಿತ ಗಣೇಶ



೧೮. ನಾಟ್ಯ ಗಣೇಶ



೧೯. ಸಂಹಾರ ಭಾವದಲ್ಲಿ ನಿಂತ ಗಣೇಶ



೨೦. ನಾಟ್ಯ ಗಣೇಶ



೨೧. ಬಾಲ್ಯ ಗಣೇಶ



೨೨. ನಂದಿಯ ಮೇಲೆ ಕುಳಿತ ಗಣೇಶ



೨೩. ಸೂರ್ಯಕಾಂತಿ ಹೂವಿನ ಮೇಲೆ
ಕುಳಿತ ಗಣೇಶ

## ಪೆನ್ ಮಾಧ್ಯಮದಲ್ಲಿ ರಚನೆಯಾದ ಗಣೇಶನ ರೇಖಾ ಚಿತ್ರಗಳು



೦೧



೦೨



೦೩



೦೪

## ಗಂಜೀಪಾ ಕಲೆಯಲ್ಲಿ ಗಣೇಶನ ಚಿತ್ರಗಳು



೧೫. ಡೋಲು ಬಾರಿಸುತ್ತಿರುವ ಗಣೇಶ



೧೬. ಹೇರಂಬ ಗಣೇಶ



೧೭. ತ್ರಿಮುಖ ಗಣೇಶ



೨೮. ಗೌರಿ ಗಣೇಶ



೨೯. ಈಶ್ವರ ಲಿಂಗ ಗಣಪತಿ



೩೦. ಗಣಪತಿ



೩೧. ಶಿವಾಜಿ ರೂಪದಲ್ಲಿ ಗಣೇಶ



೩೨. ಗಣೇಶನ ವಿವಿಧ ರೂಪಗಳು



೩೩. ಕುಳಿತಿರುವ ಗಣೇಶ



೩೪. ಕಮಲದ ಮೇಲೆ ಕುಳಿತಿರುವ ಗಣೇಶ



೩೫. ಚಂದ್ರನ ಮೇಲೆ ಕುಳಿತ ಗಣೇಶ




೩೬. ಸಾಯಿಬಾಬಾ ರೂಪದಲ್ಲಿ ಗಣೇಶ



೩೭. ಕಿನ್ನಾಳ ಕಲೆಯಲ್ಲಿ ಗಣೇಶ



೩೮. ನಟರಾಜನ ಪಕ್ಕದಲ್ಲಿರುವ ಗಣಪತಿ



೩೯. ಭಿತ್ತಿಯಲ್ಲಿ ಗಣೇಶ

### ಅಧ್ಯಾಯ – ಏಳು

# ಸಮಕಾಲೀನ ಸಂದರ್ಭದಲ್ಲಿ ಗಣೇಶೋತ್ಸವ ಹಾಗೂ ಚಿತ್ರ–ಶಿಲ್ಪಗಳು ಮತ್ತು ಕಲಾವಿದರು

ಆದಿಮಾನವನ ಕಾಲದಿಂದಲೂ ಮಾನವನು ತನ್ನ ಬದುಕಿನ ಉನ್ನತ ಶ್ರೇಯಸ್ಸಿಗಾಗಿ ಅಥವಾ ಆರೋಗ್ಯ ನಿವಾರಣೆಗಾಗಿ ಮತ್ತು ನಾನು ಎಲ್ಲಿಂದ ಬಂದಿದ್ದೇನೆ? ಎಲ್ಲಿಗೆ ಹೋಗುತ್ತೇನೆ? ಏನು ಮಾಡುತ್ತೇನೆ? ಎನ್ನುವ ಹಲವಾರು ವಿಚಾರಗಳು ದೇವರ ಕಲ್ಪನೆಯಾಗಿದೆ. ಮಾನವನು ತನ್ನ ದಿನನಿತ್ಯದ ಚಟುವಟಿಕೆಗಳು ಸುಗಮವಾಗಿ ನಡೆಯುವಂತೆ ತನಗೆ ಸಂಬಂಧವಿದ್ದ ಅಗೋಚರ ಶಕ್ತಿಗಳು ನಂಬಿಕೆ, ಆಚರಣೆ, ಪೂಜೆ, ವಿಧಿ–ವಿಧಾನಗಳು, ಜಾತ್ರೆ–ಉತ್ಸವಗಳನ್ನು ಮಾಡುತ್ತ ಬಂದಿದ್ದಾನೆ. ನಂಬಿಕೆ ಮತ್ತು ಆಚರಣೆಗಳ ಕುಲದೇವರ ಆರಾಧನೆಗಳ ಮೇಲೆ ರೂಪಗೊಂಡಂತವುಗಳಾಗಿವೆ. ನಂಬಿಕೆ, ಆಚರಣೆಗಳು ಮನುಷ್ಯನ ದಿನನಿತ್ಯದ ಎರಡು ಮುಖಗಳು. ನಂಬಿಕೆ ಮಾತಿನ ಮೂಲಕ ಸ್ಫೂರ್ತಿ ನೀಡಿದರೆ ಆಚರಣೆ ಕ್ರಿಯೆಯ ಮೂಲಕ ವಿಶಿಷ್ಠ ಸ್ಥಾನವನ್ನು ಪಡೆದುಕೊಳ್ಳುತ್ತದೆ.[೧] ನಮ್ಮ ಜನಪದರಲ್ಲಿ ಹಲವಾರು ರೀತಿಯ ನಂಬಿಕೆಗಳು ಅಡಕವಾಗಿವೆ. ಇಂತಹ ನಂಬಿಕೆಗಳ ಮೂಲಕ ಆಚರಣೆಗಳು ಇನ್ನಷ್ಟು ಸದೃಡಗೊಂಡಿವೆ. ಈ ರೀತಿಯ ಆಚರಣೆಗಳನ್ನು ನಮ್ಮ ಜನಪದರು ಬಹಳ ಹಿಂದಿನಿಂದಲೂ ಆಚರಿಸಿಕೊಂಡು ಬಂದಿರುವುದು ಸಮಕಾಲೀನ ಸಂದರ್ಭದಲ್ಲಿಯೂ ಸಹ ಕಾಣುತ್ತೇವೆ.

ಜನಪದರು ಊರಿನಲ್ಲಿರುವ ಹಲವಾರು ದೇವರುಗಳ ಆಚರಣೆ ಮತ್ತು ಉತ್ಸವಗಳನ್ನು ವಿವಿಧ ರೀತಿಯಲ್ಲಿ ಆಚರಿಸುತ್ತಾ ಬಂದಿರುವುದನ್ನು ಇಂದಿಗೂ ನೋಡುತ್ತೇವೆ. ಆಚರಣೆಗಳು ವಿವಿಧ ನಂಬಿಕೆಗಳ ಆಧಾರದ ಮೇಲೆ ಉಗಮಗೊಂಡವು. ಇಂತಹ ನಂಬಿಕೆ, ಆಚರಣೆಗಳಲ್ಲಿ

---

೧. ಡಾ. ಆರ್.ಆಯ್. ಛಪ್ಪರಬಂದ, ವಿಜಾಪುರ ಜಿಲ್ಲೆಯ ಜಾತ್ರೆಗಳು, ಪು–೮೭

ದೇವರ ಬಗ್ಗೆ ಇರುವ ಭಯ ಹಾಗೂ ಆ ದೇವರು ತೋರಿಸಿದ ಪವಾಡ, ನಿಗೂಢ ಸತ್ಯಗಳು ಕೆಲವೊಮ್ಮೆ ರೋಗ-ರುಜಿನಗಳಿಂದ ಜನರನ್ನು ರಕ್ಷಿಸಿದ್ದು, ಕ್ಷಾಮ-ಬರಗಾಲಗಳಿಂದ ಉಳಿಸಿದ್ದು, ಸಂತಾನ ನೀಡಿದ್ದು, ಮುತ್ತೈದಿತನ ನೀಡಿದ್ದು, ಬಾದೆಗಳಿಂದ ಬೆಳೆ ಉಳಿಸಿದ್ದು, ಬಾವಿಗಳಲ್ಲಿ ನೀರು ಬರುವಂತೆ ಮಾಡಿದ್ದು ಇತ್ಯಾದಿಗಳು ಈ ನಂಬಿಕೆಗಳ ಒಂದಲ್ಲೊಂದು ಆಧಾರದ ಮೇಲೆ ಜಾತ್ರೆ, ಉರುಸು, ಉತ್ಸವಗಳು ಇಂದಿಗೂ ಜರಗುವುದಕ್ಕೆ ಆ ದೇವರ ಪವಾಡ ಹಾಗೂ ಭಕ್ತಿಯೇ ಇದಕ್ಕೆ ಕಾರಣವಾಗಿದೆ.[೨]

ಪ್ರಪಂಚದ ವಿವಿಧ ದೇಶಗಳಲ್ಲಿ ಅನೇಕ ಜನಾಂಗಗಳಿದ್ದಂತೆ ನಮ್ಮ ದೇಶದಲ್ಲಿಯೂ ಹಲವಾರು ಜನಾಂಗಗಳಿವೆ. ವಿವಿಧ ಜನಾಂಗಗಳಲ್ಲಿ, ವಿವಿಧ ಸಂಪ್ರದಾಯಗಳು, ಆಚರಣೆಗಳು ನಡೆದುಕೊಂಡು ಬಂದಿವೆ. ಆದರೆ ಜನರು ವಿವಿಧ ಜನಾಂಗಗಳನ್ನು ಮರೆಯಬಹುದು ಆದರೆ ಸಂಪ್ರದಾಯಗಳನ್ನು ಮರೆಯುವುದಿಲ್ಲ. ಸಂಪ್ರದಾಯಗಳು, ಆಚರಣೆಗಳು, ಉತ್ಸವಗಳು ಒಂದಕ್ಕೊಂದು ಪೂರಕವಾಗಿರುತ್ತವೆ. ವಿವಿಧ ಜನಾಂಗದವರು, ವಿವಿಧ ದೇವರುಗಳ ಉತ್ಸವ, ಜಾತ್ರೆಗಳನ್ನು ಆಚರಿಸುತ್ತಾ ಬಂದಿದ್ದಾರೆ. ಇಲ್ಲಿ ಉದಾಹರಿಸುವುದಾದರೆ ಮಾರೆಮ್ಮನ ಹಬ್ಬ, ಹೋಳಿ ಹಬ್ಬ, ಕಾರ ಹುಣ್ಣಿಮೆ, ದೀಪಾವಳಿ, ವಿಜಯದಶಮಿ. ವಿವಿಧ ದೇವರುಗಳ ಜಾತ್ರೆಗಳು ನಾಗಲಿ ಎಲ್ಲಮ್ಮ, ಸವದತ್ತಿ ಎಲ್ಲಮ್ಮ, ಜೇವರ್ಗಿ ಲಕ್ಷ್ಮೀ, ಶಿವೂರ ಲಕ್ಷ್ಮೀ, ಮುನಿರಾಬಾದ್ ಹುಲಿಗೆಮ್ಮ, ಶಿರಸಂಗಿ ಕಾಳಮ್ಮ, ಇಟಗಿ ಭೀಮಾಂಬಿಕಾ, ಘತ್ತರಗಿ ಭಾಗಮ್ಮ, ಯಾದಗಿರಿ ಮೌನೇಶ್ವರ, ದಂಡಗುಂಡ ಬಸವಣ್ಣ, ಧಾರವಾಡ ಬಸವಣ್ಣ, ಯಲಗೂರ ಹಣಮಪ್ಪ, ಮಹಾಲಿಂಗಪೂರ ಮಹಾಲಿಂಗೇಶ್ವರ, ಕಡಪಟ್ಟಿ ಬಸವಣ್ಣ, ಹಂಪಿ ವಿರೂಪಾಕ್ಷ ಹೀಗೆ ಹಲವಾರು ರೀತಿಯ ಜಾತ್ರೆಗಳನ್ನು ಆಚರಿಸುತ್ತಾರೆ. ಅದೇ ರೀತಿ ಕೆಲವು ಜನಪದರು ವಿಶಿಷ್ಟ ರೀತಿಯಲ್ಲಿ ಆಚರಿಸುವ ಕೆಲವು ಆಚರಣೆ ಮತ್ತು ಉತ್ಸವಗಳಿವೆ. ಮಣ್ಣೆತ್ತಿನ ಅಮವಾಸೆ, ಜೋಕುಮಾರ, ಶೀಗಿ ಹುಣ್ಣಿಮೆ, ಗೌರಿ ಹುಣ್ಣಿಮೆ ಮತ್ತು ಗಣೇಶ ಚತುರ್ಥಿಗಳನ್ನು ಆಚರಿಸುತ್ತಾರೆ. ಈ ಆಚರಣೆಗಳಲ್ಲಿ ಮಣ್ಣಿನ ಮೂರ್ತಿಗಳನ್ನು ತಯಾರಿಸಿ ಒಂದು, ಐದು, ಏಳು, ಹನ್ನೊಂದು ದಿನಗಳವರೆಗೆ ಪೂಜಿಸಿ ಮತ್ತೆ ಅವುಗಳನ್ನು ಕೆರೆ, ಹಳ್ಳ, ಬಾವಿಗಳಿಗೆ ಹೋಗಿ ಪೂಜೆಗಳನ್ನು ಸಲ್ಲಿಸಿ ಅವುಗಳನ್ನು ವಿಸರ್ಜಿಸಿ ಬರುತ್ತಾರೆ.

**ಗಣೇಶೋತ್ಸವ :** ಪ್ರತಿವರ್ಷವು ಭಾದ್ರಪದ ಮಾಸದಲ್ಲಿ ಗಣೇಶೋತ್ಸವವನ್ನು ಆಚರಿಸುವರು. ಗಣೇಶನು ಜನಪದರ ಆರಾಧ್ಯದೈವ ಮತ್ತು ಹೆಣ್ಣುಮಕ್ಕಳಿಗೆ ಸಂತಾನ ಭಾಗ್ಯ ಕೊಡುವ ದೇವನಾಗಿದ್ದಾನೆ. ಇವನನ್ನು ಮಣ್ಣಿನಲ್ಲಿ ಅಥವಾ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚಿಸಿ ಕೂಡಿಸುವರು. ಇವನು ಶಿವ-ಪಾರ್ವತಿಯರ ಮಗನೆಂದು ಪುರಾಣ ಕಥೆಗಳಲ್ಲಿ ಬರುತ್ತದೆ. ಆದರೆ ಇವನು ಪಾರ್ವತಿಯ ಗರ್ಭದಿಂದ ಜನಿಸಿದವನಲ್ಲ, ಇವನು ಪಾರ್ವತಿಯ ಮೈ ಮಲದಿಂದ ಜನಿಸಿದವನು ಎಂದು ಶಿವ ಪುರಾಣ ಹೇಳುತ್ತದೆ. ಅದಕ್ಕಾಗಿ ಇವನನ್ನು ಮಣ್ಣಿನಿಂದ ಮೂರ್ತಿಯನ್ನು

---

೨. ಡಾ. ಆರ್.ಆಯ್. ಛಪ್ಪರಬಂದ, ವಿಜಾಪುರ ಜಿಲ್ಲೆಯ ಜಾತ್ರೆಗಳು, ಪು-೮೭

ಮಾಡುತ್ತಾರೆಂಬ ವಾಡಿಕೆ ಇದೆ. ವಿವಿಧ ಪುರಾಣ, ವಿವಿಧ ರೀತಿಯ ಕಲ್ಪನೆಯನ್ನು ಕೊಡುತ್ತವೆ. ಆದರೆ ಇವನು ವೇದಕಾಲದಲ್ಲಿ ಹುಟ್ಟಿದವನಲ್ಲ, ನಂತರದಲ್ಲಿ ಹುಟ್ಟಿದವನು. ಕೆಲವು ಪುರಾಣಗಳ ಪ್ರಕಾರ ಇವನು ಅಗ್ರ ಪೂಜೆಗೊಳ್ಳುವ ವರವನ್ನು ಶಿವನಿಂದ ಪಡೆದಿದ್ದ ಎನ್ನುವ ಉಲ್ಲೇಖಗಳು ಸಹ ಕಂಡುಬರುತ್ತವೆ. ಆದರೆ ಇಲ್ಲಿ ಇನ್ನೊಂದು ಕಥೆಯಿದೆ. ಗಣಪತಿಯದ್ದು ಆರ್ಯ ಹಾಗೂ ಅನಾರ್ಯ ಸಂಸ್ಕೃತಿಗಳು ಸಂಘರ್ಷವಾಗಿ ಕರಗಿ ಒಂದಾಗಿ ಇಳಿದ ಎರಕ ಎಂದು ಹೇಳಬಹುದಾಗಿದೆ. ಇಲ್ಲಿ ಆರ್ಯ ಇದೊಂದು ಜನಾಂಗ, ಅನಾರ್ಯ ಇದು ದ್ರಾವಿಡ ಜನಾಂಗದ ಹೆಸರು.

ಆರ್ಯರು ಭರತ ಖಂಡಕ್ಕೆ ಬಂದಮೇಲೆ ತಮ್ಮ ಪಂಗಡವೊಂದನ್ನು ಬಿಟ್ಟು ಉಳಿದ ಯಾವುದೇ ಪಂಗಡವಿದ್ದರೂ ಅದಕ್ಕೆ ಅನಾರ್ಯ (ಆರ್ಯರಲ್ಲದವರು)ರೆಂದು ಕರೆದಿದ್ದಾರೆ. ಮೊಟ್ಟಮೊದಲು ಹೀಗೆ ಕರೆಯುವಾಗ ಆರ್ಯರೆಂದರೆ ಸುಸಂಸ್ಕೃತರು, ಅನಾರ್ಯರೆಂದರೆ ಸಂಸ್ಕೃತಿ ಇಲ್ಲದವರು ಎಂಬ ಅರ್ಥವಾಗಲಿ, ಇಲ್ಲವೆ ಕಲ್ಪನೆಯಾಗಲಿ ಇರಲಿಕ್ಕಿಲ್ಲ. ಹೀಗೆ ಕರೆದ ಉದ್ದೇಶವು ಕೇವಲ ಜನಾಂಗಗಳನ್ನು ವಿಂಗಡಿಸಿ ತೋರಿಸಲಾಗಿರಬಹುದು. ಈ ಕಲ್ಪನೆಯು ಮುಂದೆ ಅನೇಕ ವರ್ಷಗಳ ನಂತರ ಬಂದಿರಬೇಕು. ಆರ್ಯರು ಭರತ ಖಂಡಕ್ಕೆ ಬರುವ ಮುನ್ನ ದ್ರಾವಿಡ ಜನಾಂಗವು ಒಕ್ಕಲಾಗಿ ಊರು, ಪಟ್ಟಣಗಳನ್ನು ಕಟ್ಟಿಕೊಂಡು ಇದ್ದರೆಂಬುದಕ್ಕೆ ಮೆಹಂಜೋದಾರೋ, ಹರಪ್ಪಾ ಈ ಪಟ್ಟಣಗಳ ಸಂಶೋಧನೆಯಿಂದ ತಿಳಿದುಬಂದಿದೆ. ಹೀಗಿದ್ದ ಕಾಲದಲ್ಲಿ ಆರ್ಯರು ಹುಲ್ಲುಗಾವಲುಗಳಿದ್ದಲ್ಲೆಲ್ಲ ಅಲೆದಾಡುತ್ತಾ ಆಕಳು ಮೊದಲಾದ ಪಶುಗಳನ್ನು ಸಾಕಿಕೊಂಡು ಒಂದೆಡೆ ಒಕ್ಕಲಾಗಿ ನಿಲ್ಲದೇ ಬೇಟೆ ಮೊದಲಾದವುಗಳನ್ನು ಆಡಿ ಹೊಟ್ಟೆ ಹೊರಹಾಕುತ್ತ ಮಧ್ಯ ಏಷ್ಯಾದ ಕೊಳಚ ಭೂಭಾಗದಿಂದ ಕೆಳಗೆ ಇಳಿಯುತ್ತ ಭರತ ವರ್ಷವನ್ನು ಪ್ರವೇಶಿಸಿದರು. ಆರ್ಯರ ಮತ್ತು ದ್ರಾವಿಡರ ತಿಕ್ಕಾಟಗಳ ಉಲ್ಲೇಖಗಳು ಪುರಾಣ ಮೊದಲಾದವುಗಳಲ್ಲಿ ಮೇಲಿಂದ ಮೇಲೆ ಕಂಡುಬರುವವು. ಒಕ್ಕಲಾಗಿ ನಿಂತ ದ್ರಾವಿಡರು ಶ್ರಮ ಸಹಿಷ್ಣುಗಳೂ ಆಗಿರಬೇಕು. ಈ ತಿಕ್ಕಾಟಗಳಲ್ಲಿ ದ್ರಾವಿಡರ ಶಕ್ತಿ ಸಾಮರ್ಥ್ಯವನ್ನು ಕಂಡ ಆರ್ಯರು ಅವರಿಗೆ ರಾಕ್ಷಸ, ಅಸುರ, ಮತ್ಸ್ಯ, ಯಕ್ಷ, ನಾಗ ಮುಂತಾದ ಹೆಸರುಗಳಿಂದ ಕರೆದಿರಬೇಕು. ಇಲ್ಲಿ ಈ ಜನಾಂಗಗಳಲ್ಲಿ ಪಂಗಡಗಳಿಗೆ ದೇವ, ಕಿನ್ನರ, ಯಕ್ಷ, ಗಂಧರ್ವ ಮೊದಲಾದ ಹೆಸರುಗಳು ಬಂದಿವೆ. ಹೀಗೆ ಬೇರೆ ಬೇರೆ ಜನಾಂಗಗಳಾದವು. ಆದರೆ ಇದರಲ್ಲಿ ಇವರು ಬೇರೆ ಬೇರೆ ದೇವರುಗಳನ್ನು ಪೂಜಿಸಿದ್ದು ಕಂಡುಬರುತ್ತದೆ.[೩]

ಭರತ ವರ್ಷದಲ್ಲಿ ಒಕ್ಕಲಾದ ದ್ರಾವಿಡರು ಶಿವನನ್ನು ಪೂಜೆ ಮಾಡುತ್ತಿದ್ದರು. ಆರ್ಯರು ಸೂರ್ಯನಾರಾಯಣನ ಪೂಜೆಯನ್ನು ಮಾಡುತ್ತಿದ್ದರು. ಇಬ್ಬರಲ್ಲಿಯೂ ಸಂಘಟನೆಯನ್ನು ತರಲು ದಕ್ಷ ಪ್ರಜಾಪತಿಯ ಮಗಳಾದ ಸತಿಯೊಡನೆ ಶಿವನ ವಿವಾಹವನ್ನು ಮಾಡಿದಂತೆ ಪುರಾಣ ಕಥೆ ಮೊದಲಾದವುಗಳಿಂದ ತಿಳಿದುಬರುವುದು. ಈ ಎರಡು ಪಂಗಡದ ಪ್ರಮುಖರು ಪರಸ್ಪರ ಏಕತೆಯಲ್ಲಿ,

ಐಕ್ಯತೆಯನ್ನು ತರಲು ಪ್ರಯತ್ನಿಸುತ್ತಿದ್ದರೆಂದು ಪುರಾಣಗಳಿಂದ ತಿಳಿದುಬರುತ್ತದೆ. ಅವರ ಆ ಪ್ರಯತ್ನದ ಫಲವೆಂದರೆ ಅವರು ಕಲ್ಪಿಸಿದ ಸಂಯೋಗ ದೇವತೆಯು ಈ ಗಣಪತಿ. ಆರ್ಯರು ತಮ್ಮ ವೈಧಿಕ ದೇವ–ದೇವತೆಗಳ ಗುಣಗಳನ್ನು ದ್ರಾವಿಡರು ಶಿವಾಚಾರದ ಸೂಚನೆಗಳನ್ನು ಇವನಲ್ಲಿ ಸೇರಿಸಿ ಓಂಕಾರ ಸ್ವರೂಪಿಯನ್ನಾಗಿ ಮಾಡಿ ಎಲ್ಲ ಮಂಗಲ ಕಾರ್ಯಗಳ ಆರಂಭ ಪೂಜೆಯನ್ನು ಸಲ್ಲಿಸುವ ಗೌರವನ್ನು ಈ ಗಣಪತಿಗೆ ಕೊಟ್ಟರು. ಅಂದಿನಿಂದ ಈ ಗಣಪತಿಯು ಎಲ್ಲ ಜನಾಂಗಗಳಿಗೆ ದೇವರಾದ ಉದಾಹರಣೆ ಬರುತ್ತದೆ. ಗಣಪತಿಯ ಪೂಜೆಯು ಭಾದ್ರಪದ ಮಾಸದಲ್ಲಿ ಬಂದರೂ ಮಣ್ಣಿನ ಪೂಜೆಯಂದು ಅವನು ಎಣಿಸುವುದಿಲ್ಲ. ತೀರ ಇತ್ತೀಚೆಗೆ ಲೋಕಮಾನ್ಯ ತಿಲಕರು ಈ ದೇವರ ಮಹತ್ವವನ್ನರಿತು ಲೋಕಮಾನ್ಯ ಬಾಲ ಗಂಗಾಧರ ತಿಲಕರು ಸ್ವಾತಂತ್ರ್ಯದ ಆಂದೋಲನಕ್ಕೆ ಸಾರ್ವಜನಿಕ ಗಣೇಶೋತ್ಸವವನ್ನು ಆಚರಿಸಿದರು. ಈ ಉತ್ಸವವು ನಮ್ಮ ಜನತೆಯಲ್ಲಿ ನವಚೇತನವನ್ನು ಹುಟ್ಟಿಸಿ ಪ್ರಭಾವಕಾರಿಯಾಗಿ ರಾಷ್ಟ್ರ ಸಂಘಟನೆಗೆ ಕಾರಣೀಭೂತವಾಯಿತೆಂದು ಹೇಳಬಹುದು.[೩] ಈ ದೇವರ ಸಂಬಂಧ ಹಳ್ಳಿಗಳಲ್ಲಿ ಅನೇಕ ಹಾಡುಗಳಿವೆ.

> ಕರಕಿಪತ್ರಿ ಕಣಗಿಲಹೂವು ಗಣನಾಥಾ ।ಪ।
> ಎಳ್ಳಹೊಲದಾಗಿರುವ ಡೊಳ್ಳ ಹೊಟ್ಟೆಯ ಬೆನವ
> ಎಳ್ಳಿನುಂಡಿಯ ಪನಿವಾರ। ತಂದೀನಿ
> ಎಳ್ಳಷ್ಟು ಮತಿಯ ಕೊಡು ನನಗ
> ಕಡಲಿ ಹೊಲದಾಗಿರುವ, ಕಟದ ಹೊಟ್ಟೆಯ ಬೆನವ
> ಕಡಲಿ ಉಂಡೀಯ ಪನಿವಾರ। ತಂದೀನಿ
> ಒಡಲೊಂದು ನುಡಿಯ ಒಡಕೊಡ[೪]

ಡೊಳ್ಳ ಹೊಟ್ಟೆಯ ಬೆನವ ಅಂದಾಗಲೆಲ್ಲ ಬೆನಕ ಎಂಬ ಹೆಸರು ನೆನಪಿಗೆ ಬರುತ್ತದೆ. ಗಣೇಶನಿಗೆ ಇನ್ನೊಂದು ಹೆಸರೇ ಬೆನಕ. ಈ ಬೆನಕನ ಆಚರಣೆಯು ಎಷ್ಟರಮಟ್ಟಿಗೆ ಪ್ರಭಾವ ಬೀರಿದೆ ಎಂದರೆ ಊರಿನ ಹೆಸರೇ ಇಡುವ ಸ್ಥಿತಿಗೆ ಪ್ರಭಾವ ಬೀರಿದೆ. ಉದಾರಣೆಗೆ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನಲ್ಲಿ ಬೆನಕನಹಳ್ಳಿ ಎಂಬ ಊರಿದೆ. ಇಲ್ಲಿ ಪ್ರತಿವರ್ಷ ಗಣೇಶ ಚತುರ್ಥಿಯ ದಿನದಂದು ಮಣ್ಣಿನಲ್ಲಿ ಗಣೇಶನ ಮೂರ್ತಿಯನ್ನು ರಚಿಸುವುದಕ್ಕೆ ಪ್ರಾರಂಭಿಸುತ್ತಾರೆ. ಅದನ್ನು ಹದಿಮೂರು, ಹದಿನಾಲ್ಕು ದಿನಗಳವರೆಗೆ ರಚಿಸಿ ಪೂಜಿಸಿ ಇಪ್ಪತ್ತೊಂದು ದಿನಕ್ಕೆ ವಿಸರ್ಜಿಸುತ್ತಾರೆ. ಆದರೆ ಗಣೇಶನ ದೇವಸ್ಥಾನದ ಬಗ್ಗೆ ಆ ಊರಿನಲ್ಲಿ ಯಾವುದೇ ರೀತಿಯ ಇತಿಹಾಸ ಕಂಡುಬರುವುದಿಲ್ಲ. ಆದರೆ ಯಾವುದೇ ರೀತಿಯ ಚಿತ್ರವಾಗಿರಬಹುದು, ಶಿಲ್ಪವಾಗಿರಬಹುದು ಸೃಜನಶೀಲತೆಯನ್ನು ಮೀರಿ ನಿಂತಿದೆ. ಭರತ ಖಂಡದಲ್ಲಿ ಗಣೇಶೋತ್ಸವವು ಸಾರ್ವಜನಿಕವಾಗಿ ಹಲವಾರು ಪುರಾಣಗಳ ಹಿನ್ನೆಲೆಯಲ್ಲಿ ಆಚರಣೆಗಳು ನಡೆಯುತ್ತಾ ಬಂದಿವೆ.

---

೩,೪. ಡಾ. ಬಿ.ಎಸ್. ಗದ್ದಗಿಮಠ, ಗದ್ದಗಿಮಠರ ಬರಹಗಳು, ಪು–೨೬ ರಿಂದ ೩೦

ಈ ಸಂದರ್ಭದಲ್ಲಿ ಗಣೇಶನನ್ನು ವಿವಿಧ ಮಣ್ಣಿನ ಇಲ್ಲವೆ ವಿವಿಧ ಮಾದರಿಗಳಲ್ಲಿ ರಚನೆ ಮಾಡುತ್ತಾರೆ. ಮೊದಲು ಗಣೇಶನ ಮೂರ್ತಿಗಳನ್ನು ಆಯಾ ಉದ್ಯೋಗದ ಜನ ಮಾತ್ರ ಗಣೇಶ ಚತುರ್ಥಿಗೆ ಮೂರ್ತಿಗಳನ್ನು ರಚನೆ ಮಾಡುತ್ತಿದ್ದರು. ಈ ಆಧುನಿಕ ಯುಗದಲ್ಲಿ ಗಣೇಶ ಚತುರ್ಥಿಯನ್ನು ಆಚರಿಸುವ ಜನ ಹೆಚ್ಚಾಗುತ್ತಿದ್ದರಿಂದ ವ್ಯಾಪಾರ ದೃಷ್ಟಿಯಿಂದ ಬೇರೆ ಬೇರೆ ಜನಾಂಗದವರು ಕಲಿತು ವಿವಿಧ ಮಾದರಿಗಳಲ್ಲಿ ಗಣೇಶನ ಶಿಲ್ಪಗಳನ್ನು ರಚಿಸುತ್ತಾ ಬಂದಿದ್ದಾರೆ. ಭಾರತೀಯರಲ್ಲಿ ಗಣೇಶನ ಗುಡಿ ಇಲ್ಲದ ಊರೇ ಇಲ್ಲ. ಗಣೇಶನ ಚಿತ್ರಪಟ ಇಲ್ಲದ ಮನೆಗಳೇ ಇಲ್ಲ ಎನ್ನುವಷ್ಟರಮಟ್ಟಿಗೆ ಪ್ರಭಾವ ಬೀರಿದ್ದಾನೆ. ಉತ್ತರ ಕರ್ನಾಟಕದಲ್ಲಿ ಪ್ರತಿ ಮನೆಯಲ್ಲಿಯೂ ಗಣೇಶನ ಕೂಡಿಸುವ ಒಂದು ಮಾಡನ್ನು ದ್ವಾರ ಬಾಗಿಲದ ಎದುರಿಗೆ ಇರುವುದು ವಿಶೇಷವಾಗಿದೆ.

**ಪೂಜಾ ವಿಧಾನ :**

ಗಣೇಶನು ಯಾವುದೇ ಒಂದು ಜಾತಿ, ವರ್ಗ, ಪಂಗಡಗಳಿಗೆ ಸೀಮಿತನಾದವನಲ್ಲ. ಅವನು ವಿಶ್ವವ್ಯಾಪಿ, ಏಕದಂತ, ಮೂಷಿಕ ವಾಹನ, ಬಾಲಕರಿಗೆ ಬಾಲ ಗಣಪತಿಯಾಗಿಯೂ, ವಯಸ್ಕರರಿಗೆ ವಿನಾಯಕನಾಗಿಯೂ, ಮಹಿಳೆಯರಿಗೆ ಗೌರಿ ಗಣಪತಿಯಾಗಿಯೂ ದರ್ಶನ ನೀಡಿ ಅವರ ಬಾಳನ್ನು ಧನ್ಯವಾಗಿಸುತ್ತಾ ಬಂದಿದ್ದಾನೆ.

ಕಲಿಯುಗದಲ್ಲಿ ಮೂರ್ತಿಪೂಜೆಯಿಂದ ಸಕಲ ಇಷ್ಟಾರ್ಥಗಳನ್ನು ಪಡೆಯಬಹುದು ಎಂದು ಈ ಹಿಂದೆಯೇ ಹೇಳಿದೆ. ಆ ಪ್ರಕಾರ ಮೂರ್ತಿಪೂಜೆಯ ಬಗ್ಗೆ ವಿವರವಾಗಿ ತಿಳಿಸಬೇಕೆಂದು ಮೂನೀಶ್ವರರು ಸೂತಮುನಿಗಳಿಗೆ ಪ್ರಾರ್ಥಿಸಲಾಗಿ ಸೂತ ಪುರಾಣಿಕರು ಮುಂದೆ ಹೇಳತೊಡಗಿದರು. ಮೂರ್ತಿಪೂಜೆಯನ್ನು ಪಾರ್ಥಿವ ಪೂಜೆ ಎಂದು ಹೇಳುವುದುಂಟು. ಆಬಗ್ಗೆ ವಿವರವಾಗಿ ಹೇಳಲಾಗಿದೆ.

ಯಾವುದೇ ದೇವತಾ ಮೂರ್ತಿಯನ್ನು ಮಾಡಿದರೂ ಅದನ್ನು ನದಿ ತೀರದ ಮಣ್ಣಿನಿಂದ ತಯಾರಿಸಿ ಪೂಜಿಸಿದ್ದೇ ಆದರೆ ಸಕಲ ಸಿದ್ಧಿಗಳು ಲಭಿಸುವುದು. ಮಣ್ಣಿಗೆ ಕ್ಷೀರವನ್ನು ಬೆರೆಸಿ ಮಾಡಿದ ಮೂರ್ತಿಪೂಜೆಯು ತುಂಬಾ ಶ್ರೇಷ್ಠವಾದದ್ದು. ಮಾನವರು ಯಾವ ದೇವತಾ ಮೂರ್ತಿಯನ್ನು ಆರಾಧಿಸುವರೋ ಅದೇ ದೇವರನ್ನು ತಮ್ಮ ಮರಣಾ ನಂತರ ಸೇರುವರು. ಮೇಲೆ ಹೇಳಿದಂತೆ ಗಣಪತಿಯ ಪೂಜೆಯು ತುಂಬಾ ಶ್ರೇಷ್ಠವಾದುದು. ಯಾಕೆಂದರೆ ಗಣೇಶನು ಮೊದಲು ಹುಟ್ಟಿದ್ದು ಮಣ್ಣಿನಿಂದ ಶಿವ ಪುರಾಣದ ಪ್ರಕಾರ ಪಾರ್ವತಿಯ ಮೈಮಲದಿಂದ ಜನಿಸಿದನು. ಮುಂದೆ ಗಜಮುಖನಾಗಿ ಪರಿವರ್ತನೆಯಾದ ಬಳಿಕ ಅಗ್ರಪೂಜೆಗೊಳ್ಳು ಎಂದು ವರವನ್ನಿತ್ತಳಂತೆ. ನಿನ್ನನ್ನು ಪೂಜಿಸಿದವರಿಗೆ ಸಕಲ ವರಗಳನ್ನು ನೀಡಿ ಅವರನ್ನು ಅನುಗ್ರಹಿಸು ಎಂದು ವರವನ್ನು ನೀಡಿದಳಂತೆ. ಇಂತಹ ವರವನ್ನು ಪಡೆದ ಗಣೇಶನಿಗೆ ಪೂಜೆ ಸಲ್ಲಿಸಿದರೆ ಅನುಗ್ರಹಿಸುತ್ತಾನೆಂಬ ನಂಬಿಕೆಯ ಮೇಲೆ ಗಣೇಶನ ಮೂರ್ತಿಯನ್ನು ಮಣ್ಣಿನಿಂದ ಮಾಡಿ

ಪೂಜಿಸುವುದು ರೂಢಿಯಲ್ಲಿದೆ. ಈ ರೀತಿಯಾಗಿ ಹಲವಾರು ದೇವರುಗಳನ್ನು ಮಣ್ಣಿನಲ್ಲಿ ಮಾಡಿ ಪೂಜಿಸುವುದು ತಿಳಿದುಬರುತ್ತದೆ.

ನಾವು ಆಧುನಿಕ ಯುಗದಲ್ಲಿ ಗಣೇಶನಿಗೆ ವಿವಿಧ ರೂಪಕೊಟ್ಟು, ವಿವಿಧ ಮಾದರಿಗಳಲ್ಲಿ ರಚಿಸುತ್ತಿರುವುದನ್ನು ನಮ್ಮ ಸಮಕಾಲೀನ ಸಂದರ್ಭದಲ್ಲಿ ನೋಡುವುದಾಗಿದೆ. ಗಣೇಶನ ಚಿತ್ರಗಳು ವಿವಿಧ ಮಾಧ್ಯಮಗಳಲ್ಲಿ ರಚನೆಯಾಗುತ್ತಿವೆ. ಜಲವರ್ಣ, ಆಕ್ರೆಲಿಕ್, ತೈಲವರ್ಣ, ಚಾರ್‌ಕೋಲ್ ಹೀಗೆ ಬೇರೆ ಬೇರೆ ಮಾಧ್ಯಮಗಳನ್ನು ಬಳಸಿಕೊಂಡು ವಿವಿಧ ರೀತಿಯಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಕೆಲವರು ರೇಖಾಚಿತ್ರಗಳನ್ನು ಮಾತ್ರ ರಚಿಸಿದವರು ಇದ್ದಾರೆ. ಇಂತಹ ಕಲಾವಿದರಲ್ಲಿ ಎಸ್.ಎಮ್. ಪಂಡಿತ, ಎಸ್. ಪ್ರಹ್ಲಾದ್, ಶಂಕರ ಪಾಟೀಲ, ವಿಜಯ ಸಿಂದೂರ, ಬಸವರಾಜ ಗವಿಮಠ, ಹೀಗೆ ಹಲವಾರು ಕಲಾವಿದರು ಗಣೇಶನ ರೇಖಾಚಿತ್ರ ಮತ್ತು ಕಲಾಕೃತಿಗಳನ್ನು ವಿವಿಧ ಮಾಧ್ಯಮಗಳನ್ನು ಬಳಸಿಕೊಂಡು ರಚಿಸಿದ್ದಾರೆ. ಬೆಳಗಾವಿಯ ವಿಶ್ವನಾಥ ಗುಗ್ಗರಿ ಇವರು ವರ್ಷವಿಡೀ ಪ್ರತಿದಿನ ಒಂದು ಚಿತ್ರದಂತೆ ೩೬೫ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಮತ್ತು ಮಾಧ್ಯಮಗಳನ್ನು ಬಳಸಿಕೊಂಡು ಚಿತ್ರಗಳನ್ನು ರಚಿಸಿದ್ದು ಕಂಡುಬರುತ್ತದೆ.

ಇನ್ನು ಶಿಲ್ಪಕಲೆಯನ್ನು ನೋಡಿದಾಗ ಮೊದಲು ಗಣೇಶನೆಂದರೆ ಒಂದೇ ರೀತಿಯ ಕಲ್ಪನೆ ಶಿಲ್ಪದಲ್ಲಿತ್ತು. ಈ ಸಮಕಾಲೀನ ಸಂದರ್ಭದಲ್ಲಿ ಹತ್ತಾರು ರೂಪಗಳನ್ನು ಪಡೆದುಕೊಂಡಿದೆ. ಮಣ್ಣು, ಕಲ್ಲು, ಕಟ್ಟಿಗೆ, ಸಿಮೆಂಟ್, ಪ್ಲಾಸ್ಟರ್ ಆಫ್ ಪ್ಯಾರಿಸ್, ಪಾಯಿಬರ್, ಚಿನ್ನ, ಬೆಳ್ಳಿ, ಕಂಚು, ಕಬ್ಬಿಣ ಹೀಗೆ ವಿವಿಧ ಮಾಧ್ಯಮಗಳಲ್ಲಿ ರಚನೆಗೊಳ್ಳುತ್ತವೆ. ಈ ಮಾಧ್ಯಮಗಳನ್ನು ಬಳಸಿಕೊಂಡು ಹಲವಾರು ಕಲಾವಿದರು ಗಣೇಶನಿಗೆ ವಿವಿಧ ರೂಪಗಳನ್ನು ಕೊಟ್ಟು ಗಣೇಶನ ಶಿಲ್ಪಗಳನ್ನು ರಚಿಸಿದ್ದಾರೆ. ಗಣೇಶ ಚತುರ್ಥಿ ಆಗಮಿಸುತ್ತಿದ್ದಂತೆ ವ್ಯಾಪಾರಿ ಕಟ್ಟೆಗಳಲ್ಲಿ ಗಣೇಶನದೇ ಕಾರುಬಾರು. ಹಲವಾರು ಜನರು ವ್ಯಾಪಾರ ದೃಷ್ಟಿಯಿಂದ ಗಣೇಶನ ಶಿಲ್ಪಗಳನ್ನು ತಯಾರಿಸಿ ಮಾರಾಟ ಮಾಡುವುದುಂಟು. ಕೆಲವು ಸಾರ್ವಜನಿಕ ಗಣಪತಿಗಳನ್ನು ನುರಿತ ಕಲಾವಿದರಿಂದ ರಚನೆ ಮಾಡಿಸುತ್ತಾರೆ. ಇದರಲ್ಲಿ ಮಣ್ಣು, ಕಲ್ಲು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಮಾಡುವ ಕಲಾವಿದರು ಹೆಚ್ಚಾಗಿದ್ದಾರೆ. ಇಂತವರಲ್ಲಿ ಕೆ. ಗಂಗಾಧರ, ಶಿವಣ್ಣ ಗೊಳಸಂಗಿ, ಕೆ.ಎಮ್. ಸಾಬಣ್ಣವರ ಅವರು ಚಿನ್ನ, ಬೆಳ್ಳಿಯಲ್ಲಿ ರಚಿಸಿದ್ದಾರೆ. ಕೆಲವರು ಭಿತ್ತಿಶಿಲ್ಪಗಳನ್ನು ಮಾಡುವರಿದ್ದಾರೆ. ಈ ಸಮಕಾಲೀನ ಸಂದರ್ಭದಲ್ಲಿ ಹೆಚ್ಚು ಗಣೇಶನ ಭಿತ್ತಿಶಿಲ್ಪಗಳನ್ನು ತಯಾರಿಸುವುದುಂಟು. ಇದರಲ್ಲಿ ಬೆಳಗಾವಿಯ ವಿನಾಯಕ ಪತ್ತಾರ, ಸಂತೋಷ ಬಹರೂಪಿ, ಬಾದಾಮಿಯ ದಾನಯ್ಯ ಚೌಕಿಮಠ ಇವರು ಟೆರ್ರಾ ಕೋಟಾ ಮಾಧ್ಯಮದಲ್ಲಿ ಭಿತ್ತಿಶಿಲ್ಪಗಳನ್ನು ರಚಿಸಿದ್ದಾರೆ. ಗುಲಬರ್ಗಾದ ವಿ.ಜಿ. ಅಂದಾನಿ, ಎಸ್.ಎಸ್. ಸಿಂಪಿ, ವೀರೇಂದ್ರ ಷಾ, ಗೌರಿಶಂಕರ, ಅಮೃತ ಶಾಹು, ವಿಜಾಪೂರದ ಗೋರಕ್ ಮದುಕರ್ ಬಾವಸರ್ ಎಂಬುವರು ಭಿತ್ತಿಶಿಲ್ಪಗಳಲ್ಲದೆ ಲೋಹದಲ್ಲಿ ಕೆಲವು ಗಣೇಶನ ಶಿಲ್ಪಗಳನ್ನು

ರಚಿಸಿದ್ದಾರೆ.ಮತ್ತು ಕಬ್ಬಿಣದ ಬಿಡಿ ಭಾಗಗಳಿಂದ ರಚಿಸಿರುವುದುಂಟು. ಮತ್ತು ಈಗಿನ ಯಾವುದೇ ಉಬ್ಬು ಶಿಲ್ಪಗಳಿದ್ದ ದೇವಾಲಯಗಳನ್ನು ಸಿಮೆಂಟ್‌ನಿಂದ ರಚನೆ ಮಾಡಿದ್ದಾರೆ. ಅಲ್ಲಿ ಗಣೇಶನ ಶಿಲ್ಪವನ್ನು ರಚಿಸಿದ್ದಾರೆ. ಹೀಗೆ ಗಣೇಶನ ಚಿತ್ರ–ಶಿಲ್ಪಗಳು ರಚನೆಯಾಗಿರುವುದು ಕಂಡುಬರುತ್ತದೆ.

**೧. ವೀರ ಗಣಪತಿ**

ಈ ಚಿತ್ರವನ್ನು ೨೦೦೬ರಲ್ಲಿ ಕಲಾವಿದ ಎಸ್. ಪ್ರಹ್ಲಾದ ಅವರು ತೈಲವರ್ಣದಲ್ಲಿ ರಚಿಸಿದ್ದಾರೆ. ೮x೬ಅಡಿ ಅಳತೆಯಲ್ಲಿದೆ. ಈ ಕಲಾಕೃತಿಯಲ್ಲಿ ಗಣೇಶನು ಕುಳಿತಿರುವಂತಹ ದೃಶ್ಯವನ್ನು ಕಾಣುತ್ತೇವೆ. ಇಲ್ಲಿ ಕಲಾವಿದನು ವೀರ ಗಣಪತಿಗೆ ೧೪ ಕೈಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಒಂದೊಂದು ಕೈಯಲ್ಲಿಯು ಸಹ ಒಂದೊಂದು ಆಯುಧವನ್ನು ಹಿಡಿದಿರುವುದನ್ನು ಕಾಣುತ್ತೇವೆ. ಎಡಭಾಗದಲ್ಲಿ ಕ್ರಮವಾಗಿ ಬೇತಾಳ (ವೇತಾಲ), ಪಾಶ, ಧನಸ್ಸು (ಕಾಮುಕ), ಬಾವುಟ (ಧ್ವಜ), ಕೊಡಲಿ (ಪರಶು), ಕತ್ತಿ (ಖಡ್ಗ), ತ್ರಿಶೂಲಗಳನ್ನು ಮತ್ತು ಬಲಭಾಗದಲ್ಲಿ ನಾಗಪಾಶ, ಮುಗ್ದರ, ಬಾಣ, ಗದೆ, ಅಂಕುಶ, ಚಕ್ರ, ಶಕ್ತ್ಯಾಯುಧಗಳನ್ನು ಹಿಡಿದಿದ್ದು, ಸುಂದರವಾದಂತಹ ಕಣ್ಣುಗಳು, ಅಗಲವಾದಂತಹ ಕಿವಿಗಳು, ಎಡಗಡೆಗೆ ಸೊಂಡಿಲು ಇದ್ದು, ಮೈಬಣ್ಣವನ್ನು ಗುಲಾಬಿ, ಹಳದಿ, ಬಿಳಿ ಬಣ್ಣಗಳ ಮಿಶ್ರಿತವಾಗಿ ರಚನೆಯಾಗಿವೆ. ಕರಂಡ ಮಕುಟ ಕಿರೀಟವು ಬಂಗಾರದ ಬಣ್ಣದಿಂದ ಕೂಡಿದ್ದು, ಸೊಂಟಕ್ಕೆ ಸುತ್ತಿರುವ ಬಟ್ಟೆಗಳು ನೀಲಿ ಮತ್ತು ಕೆಂಪು ಬಣ್ಣದಿಂದ ಕೂಡಿವೆ. ಭುಜದ ಮೇಲೆ ತೆಳು ನೀಲಿ ಬಟ್ಟೆಯನ್ನು ಧರಿಸಿದ್ದು, ಕಲಾಕೃತಿಯ ಹಿನ್ನೆಲೆಯಲ್ಲಿ ಕೆಂಪು, ಹಳದಿ, ನೀಲಿ, ಕಪ್ಪು, ಕಂದು ನೇರಳೆ ಹಲವಾರು ಬಣ್ಣಗಳಿಂದ ರಚಿಸುವುದನ್ನು ಕಾಣುತ್ತೇವೆ. ಕಲಾವಿದನು ಒಟ್ಟಾರೆಯಾಗಿ ಈ ಕಲಾಕೃತಿಯನ್ನು ಅತಿ ಸುಂದರವಾಗಿ ರಚಿಸಿದ್ದಾರೆ. ಈ ಕಲಾಕೃತಿಯು ಎಸ್.ಪ್ರಹ್ಲಾದ ಅವರ ಸಂಗ್ರಹದಲ್ಲಿದೆ[೫]

**೨. ಸಂಗೀತದಲ್ಲಿ ನಿರತರಾದ ವಿನಾಯಕರು**

ಈ ಕಲಾಕೃತಿಯನ್ನು ಕಲಾವಿದ ಎಸ್.ಪ್ರಹ್ಲಾದ ಅವರು ೨೦೦೪ರಲ್ಲಿ ತೈಲವರ್ಣದಿಂದ ರಚಿಸಿದ್ದಾರೆ. ೪X೬ಅಡಿ ಅಳತೆಯಲ್ಲಿದೆ. ಈ ಕಲಾಕೃತಿಯಲ್ಲಿ ಗಣೇಶನು ಸಂಗೀತದಲ್ಲಿ ನಿರತನಾಗಿರುವುದನ್ನು ಕಾಣಬಹುದು. ವೀಣೆಯನ್ನು ನುಡಿಸುತ್ತಿರುವ ಗಣೇಶನು ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಂಡಿದ್ದು, ಸಂಗೀತದಲ್ಲಿ ಮಗ್ನನಾಗಿರುವುದನ್ನು ಕಾಣುತ್ತೇವೆ. ಅಗಲವಾದ ಕಿವಿಗಳು, ಸುಂದರವಾದಂತ ಕಿರೀಟ, ಅದರ ಹಿಂದೆ ಚಿಕ್ಕ ಪ್ರಭಾವಳಿ, ಭುಜದ ಮೇಲೆ ನೀಲಿ ಬಟ್ಟೆ, ಕೊರಳಿಗೆ ಸರ, ಕೈಗಳಿಗೆ ಕೈಗಡಗ ಹಾಕಿಕೊಂಡಿದ್ದು, ಸೊಂಡಿಲನ್ನು ಬಲಭಾಗಕ್ಕೆ ಚಾಚಿಕೊಂಡಿದ್ದಾನೆ. ವೀಣೆಯನ್ನು ತುಂಬ ಸುಂದರವಾಗಿ ರಚಿಸಿದ್ದು, ಕಂದು, ಹಳದಿ, ಬಿಳಿಯ ಬಣ್ಣದಿಂದ ಕೂಡಿದೆ. ತನ್ನ ಸೊಂಟಕ್ಕೆ ಗುಲಾಬಿ ಮತ್ತು ಬಿಳಿಯ ವಸ್ತ್ರವನ್ನು ಧರಿಸಿದ್ದನ್ನು ನಾವು ನೋಡಬಹುದು. ಈ ಚಿತ್ರಾಕೃತಿಯ ಎಡಭಾಗದಲ್ಲಿ ತಬಲ ನುಡಿಸುತ್ತಿರುವ ಮತ್ತೊರ್ವ ಗಣಪತಿಯನ್ನು

---

೫. ಈ ಕಲಾಕೃತಿಯು ಎಸ್.ಪ್ರಹ್ಲಾದ ಅವರ ಸಂಗ್ರಹದಲ್ಲಿದೆ

ನೋಡಬಹುದು. ಇಲ್ಲಿ ಬಲಪಾರ್ಶ್ವದಲ್ಲಿ ಕುಳಿತಿದ್ದು, ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ತಬಲ ಹೊಡೆಯುವುದರಲ್ಲಿ ನಿರತವಾಗಿದ್ದಾನೆ. ತನ್ನ ಸೊಂಡಿಲನ್ನು ಮಡಚಿಕೊಂಡಿದ್ದು, ಉದ್ದನೆಯ ಕೇಶವಿನ್ಯಾಸದಿಂದ ಕೂಡಿವೆ. ತನ್ನ ಕೈತೋಳಿಗೆ ತೋಳಬಂಧಿ ಹಾಕಿಕೊಂಡಿದ್ದು, ಕೈಗೆ ಕೈಗಡಗ ಮತ್ತು ಬೆರಳುಗಳಿಗೆ ಉಂಗುರಗಳನ್ನು ಹಾಕಿಕೊಂಡು ಗುಲಾಬಿ ಬಣ್ಣದ ವಸ್ತ್ರವನ್ನು ಧರಿಸಿದ್ದಾನೆ. ತನ್ನ ತಬಲದ ಬಣ್ಣವು ಕಂದು ಮತ್ತು ಬಿಳಿಯ ಬಣ್ಣದಿಂದ ಕೂಡಿದ್ದು, ಒಂದು ಕಾಲನ್ನು ನೆಲಕ್ಕೆ ಊರಿ ಮತ್ತೊಂದು ಕಾಲನ್ನು ಮಡಚಿಕೊಂಡಿರುವುದನ್ನು ಕಾಣುತ್ತೇವೆ. ಹಿಂಭಾಗದಲ್ಲಿ ಮತ್ತೊಬ್ಬ ಗಣಪನು ಗಡಿಗೆ ಹೊಡೆಯುತ್ತಿದ್ದು ಅವನು ಸಹ ಸುಂದರವಾದ ಕಿರೀಟ, ಉದ್ದನೆಯ ಸೊಂಡಿಲನ್ನು ಮಡಚಿಕೊಂಡಿದ್ದು, ದೊಡ್ಡ ದೊಡ್ಡ ಗಾತ್ರದ ಕಿವಿಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಅವನು ಧ್ವನಿಯನ್ನು ಕೇಳಿ ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಂಡಿದ್ದು ಕೊರಳಿಗೆ ಸರ, ಕೈಗಳಿಗೆ ಕೈಗಡಗ, ಭುಜದ ಮೇಲೆ ಕೇಸರಿ ಬಣ್ಣದಿಂದ ಕೂಡಿದ ವಸ್ತ್ರ, ಸೊಂಟಕ್ಕೆ ಹಸಿರು ಬಣ್ಣದ ವಸ್ತ್ರವನ್ನು ತೊಟ್ಟಿರುವುದನ್ನು ಕಾಣುತ್ತೇವೆ. ಬಲಭಾಗದಲ್ಲಿ ಕೊಳಲನ್ನು ನುಡಿಸುತ್ತಿರುವ ಗಣಪತಿಯನ್ನು ನೋಡಬಹುದು. ಇಲ್ಲಿ ಮುಖವನ್ನು ಬಲಕ್ಕೆ ಮಾಡಿಕೊಂಡಿದ್ದು, ತನ್ನ ಸೊಂಡಿಲಿನಿಂದ ಕೊಳಲನ್ನು ಹಿಡಿದುಕೊಂಡು ತನ್ನ ಎರಡು ಕೈಗಳಲ್ಲಿ ಕೊಳಲನ್ನು ನುಡಿಸುತ್ತಿರುವುದನ್ನು ಕಾಣುತ್ತೇವೆ. ಕೈಗಳಿಗೆ ಕೈಗಡಗ ಹಾಕಿಕೊಂಡಿದ್ದು, ಭುಜದ ಮೇಲೆ ಗುಲಾಬಿಯಿಂದ ಕೂಡಿದರೆ ಅಂಚುಗಳು ಹಳದಿ ಬಣ್ಣದಿಂದ ಕೂಡಿವೆ. ಸೊಂಟಕ್ಕೆ ಸುತ್ತಿಕೊಂಡಿರುವಂತ ಬಟ್ಟೆಯು ಹಳದಿ ಮಿಶ್ರಿತ, ಕೆಂಪು ಮಿಶ್ರಿತದಿಂದ ಕೂಡಿದೆ. ಈ ಕಲಾಕೃತಿಯು ಎಸ್.ಪ್ರಹ್ಲಾದ ಅವರ ಸಂಗ್ರಹದಲ್ಲಿದೆ.[೬]

**೩. ಹಂಪೆಯಲ್ಲಿ ಗಣೇಶ**

ಈ ಚಿತ್ರವನ್ನು ೨೦೦೮ರಲ್ಲಿ ಕಲಾವಿದ ಎಸ್.ಪ್ರಹ್ಲಾದ ಅವರು ರಚಿಸಿದ್ದು ೨X೪ ಅಡಿ ಅಳತೆಯಲ್ಲಿದೆ. ಈ ಕಲಾಕೃತಿಯಲ್ಲಿ ಗಣೇಶನು ವೀಣೆಯನ್ನು ನುಡಿಸುತ್ತಿರುವುದನ್ನು ಕಾಣಬಹುದು. ಇಲ್ಲಿ ಗಣೇಶನ ಮೈಬಣ್ಣವನ್ನು ಗುಲಾಬಿ, ಹಳದಿ, ಬಿಳಿ ಮಿಶ್ರಿತ ಮಾಡಿ ಲೇಪಿಸಿದ್ದಾರೆ. ಗಣೇಶನು ವೀಣೆಯನ್ನು ನುಡಿಸುತ್ತಿರುವುದರಲ್ಲಿ ತಲ್ಲಿನನಾಗಿದ್ದಾನೆ ಎಂದು ಹೇಳಬಹುದು. ಯಾಕೆಂದರೆ ವೀಣೆಯ ನಾದದಿಂದ ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಂಡು ಸಂಗೀತದಲ್ಲಿ ಮಗ್ನನಾಗಿರುವುದನ್ನು ಕಾಣುತ್ತೇವೆ. ಅಗಲವಾದ ಕಿವಿಗಳು, ಸುಂದರವಾದ ಕಿರೀಟವನ್ನು ಹೊಂದಿದ್ದು, ತನ್ನ ಸೊಂಡಿಲನ್ನು ಬಲಕ್ಕೆ ಚಾಚಿಕೊಂಡಿರುವಂತೆ ರಚಿಸಿದ್ದಾರೆ. ತನ್ನ ಎರಡು ಕೈಗಳಿಂದ ವೀಣೆಯನ್ನು ಹಿಡಿದು ನುಡಿಸುತ್ತಿದ್ದು, ತನ್ನ ಕೊರಳಲ್ಲಿ ಸರವನ್ನು ಹಾಕಿಕೊಂಡಿದ್ದು, ಬಿಳಿಯ ಜನಿವಾರವನ್ನು ಹಾಕಿಕೊಂಡಿದ್ದು, ಕೈಗಳಿಗೆ ಕೈಗಡಗವನ್ನು, ಸೊಂಟಕ್ಕೆ ಗುಲಾಬಿ ಮತ್ತು ಹಳದಿ ಬಣ್ಣದಿಂದ ಕೂಡಿದ ಬಟ್ಟೆಯನ್ನು ಸುತ್ತಿಕೊಂಡಿದ್ದು, ಹಿಂಭಾಗದಲ್ಲಿ ಹಂಪೆಯಲ್ಲಿನ ಗುಡಿಯ ಕಂಬಗಳ ವಿನ್ಯಾಸವನ್ನು ಅದ್ಭುತವಾಗಿ ರಚಿಸಿರುವ ಕಲಾವಿದರು ಗಣಪತಿಯ ಎಡಭಾಗದಲ್ಲಿ ತಬ್ಬಗಳನ್ನು ಕಾಣಬಹುದು. ಅದರ ಹಿಂದಿನ ಭಾಗದಲ್ಲಿ ದೂರದಲ್ಲಿರುವ ಗುಡ್ಡ ಮತ್ತು ಪರಿಸರವನ್ನು ಕಲಾವಿದನು ಈ ಕಲಾಕೃತಿಯಲ್ಲಿ ರಚಿಸಿದ್ದಾರೆ.[೭]

೬. ಈ ಕಲಾಕೃತಿಯು ಎಸ್.ಪ್ರಲ್ಹಾದ ಅವರ ಸಂಗ್ರಹದಲ್ಲಿದೆ

೭ ಈ ಕಲಾಕೃತಿಯು ಎಸ್.ಪ್ರಲ್ಹಾದ ಅವರ ಸಂಗ್ರಹದಲ್ಲಿದೆ

### ೪. ಇಲಿಯ ಮೇಲೆ ಸವಾರಿ ಮಾಡುತ್ತಿರುವ ವಿನಾಯಕ

ಈ ಚಿತ್ರವನ್ನು ೧೯೮೬ರಲ್ಲಿ ಕಲಾವಿದ ವಿಜಯ ಸಿಂದೂರ ಅವರು ರಚಿಸಿದ್ದು[೮] ಈ ಕಲಾಕೃತಿಯಲ್ಲಿ ಗಣೇಶನು ತನ್ನ ವಾಹನವಾದ ಇಲಿಯ ಮೇಲೆ ಸವಾರಿ ಮಾಡುತ್ತಿರುವುದನ್ನು ನೋಡುತ್ತೇವೆ. ಇಲ್ಲಿ ಮೊದಲು ಕೆಂಪು, ಹಳದಿ, ಬಿಳಿ, ನೀಲಿ ಬಣ್ಣಗಳಿಂದ ಲೇಪಿಸಿದ್ದು, ಹೊರ ರೇಖೆಗಳನ್ನು ಹಾಕಿರುವುದನ್ನು ಕಾಣುತ್ತೇವೆ. ಗಣೇಶನು ತನ್ನ ಎಡಗೈಯಿಂದ ಇಲಿಯ ಬಾಲವನ್ನು ಹಿಡಿದುಕೊಂಡು, ಬಲಗೈಯಲ್ಲಿ ಹಾವನ್ನೆ ಚಾಟಿಯನ್ನಾಗಿ ಮಾಡಿಕೊಂಡು ಹೋಗುತ್ತಿರುವುದನ್ನು ಕಾಣುತ್ತೇವೆ. ಇಲಿಯು ಗಣಪತಿಯ ಭಾರವನ್ನು ತಡೆಯಲಾರದೆ ತನ್ನ ಮುಖವನ್ನು ಮೇಲಕ್ಕೆತ್ತಿಕೊಂಡು ತನ್ನ ಕಾಲುಗಳನ್ನು ಮೆಲ್ಲನೆ ಇಡುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ಗಣಪತಿಯನ್ನು ಬೋಳುತಲೆ, ದೊಡ್ಡಗಾತ್ರದ ಕಿವಿಗಳು, ತನ್ನ ಸೊಂಡಿಲನ್ನು ಮಡಚಿಕೊಂಡಿದ್ದು, ತನ್ನ ಕೊರಳಿಗೆ ಸರ, ದೊಡ್ಡಗಾತ್ರದ ಹೊಟ್ಟೆಯನ್ನು ಹೊಂದಿರುವ ಗಣಪತಿಯು ಸವಾರಿ ಮಾಡುತ್ತಿರುವುದನ್ನು ನೋಡಬಹುದಾಗಿದೆ. ಈ ಚಿತ್ರವನ್ನು ನೋಡಿದಾಕ್ಷಣದಲ್ಲಿ ಇದಕ್ಕೆ ಆಧುನಿಕ ಕಾಲದ ಕಲಾವಿದರ ನೆರಳು ಬಿದ್ದಿದೆ ಎಂದು ಹೇಳಬಹುದು.

### ೫. ಆಧುನಿಕ ಶೈಲಿಯಲ್ಲಿ ಗಣೇಶ

ಈ ಕೃತಿಯನ್ನು ಕಲಾವಿದ ವಿಜಯ ಸಿಂದೂರ ಅವರು ತೈಲ ವರ್ಣದಲ್ಲಿ ರಚಿಸಿದ್ದಾರೆ[೯] ಈ ಕಲಾಕೃತಿಯಲ್ಲಿ ಆಧುನಿಕ ಕಲಾವಿದರುಗಳು ಗಣೇಶ ಚಿತ್ರಗಳನ್ನು ರಚಿಸಲು ತೊಡಗಿದ್ದು, ವಿಭಿನ್ನವಾಗಿ ರಚಿಸಿರುವುದನ್ನು ನೋಡಬಹುದು. ನೋಡುಗರ ದೃಷ್ಟಿಗೆ ಮಸುಕಾಗಿ ಕಂಡರೂ ಅದರಲ್ಲಿ ಗಣಪತಿಯ ರೂಪವನ್ನು ಕಾಣಬಹುದು. ಬೋಳುತಲೆಯನ್ನು ಹೊಂದಿದ್ದು ದೊಡ್ಡ ದೊಡ್ಡ ಗಾತ್ರದ ಕಿವಿಗಳು, ಬಿಳಿಯ ಬಣ್ಣದಿಂದ ಕೂಡಿದಂತ ದಂತಗಳು, ಕೊರಳಿಗೆ ಸರ ಮತ್ತು ತನ್ನ ಸೊಂಟಕ್ಕೆ ಹಳದಿ ಬಣ್ಣದ ವಸ್ತ್ರವನ್ನು ಸುತ್ತಿಕೊಂಡಿರುವುದನ್ನು ಕಾಣಬಹುದು. ಹಿಂದಿನ ಭಾಗದಲ್ಲಿ ಬಿಳಿ, ಗುಲಾಬಿ ಮಿಶ್ರಿತ ಬಣ್ಣವನ್ನು ಲೇಪಿಸಿ, ಹಾವಿನ ಆಕಾರ ಹೋಲುವಂತೆ ಮಸುಕಾಗಿ ಚಿತ್ರಿಸಿದ್ದಾರೆ. ಈ ಕಲಾಕೃತಿಯನ್ನು ನೋಡಿದರೆ ಆಧುನಿಕ ಕಾಲದಲ್ಲಿ ಕಲಾವಿದನ ಹೊಸ ಶೈಲಿ ಎಂದು ಕರೆಯಬಹುದಾಗಿದೆ. ಗಣಪತಿಯು ಕಪ್ಪು, ಕೆಂಪು, ಹಳದಿ, ಬಿಳಿ ಬಣ್ಣಗಳಿಂದ ಕೂಡಿದೆ. ಒಟ್ಟಾರೆ ಕಲಾಕೃತಿಯು ಸುಂದರವಾಗಿ ರಚನೆಯಾಗಿರುವುದನ್ನು ಕಾಣುತ್ತೇವೆ.

---

೮ ಈ ಕಲಾಕೃತಿಯನ್ನು ವಿಜಯ ಸಿಂದೂರ ಅವರ ಜೀವನ ಮತ್ತು ಕಲಾಕೃತಿಗಳು ಒಂದು ಅಧ್ಯಯನ ಎಂಬ ಅಪ್ರಕಟಿತ ಮಹಾ ಪ್ರಬಂಧದಿಂದ ಆಯ್ದುಕೊಳ್ಳಲಾದೆ.

೯. ಈ ಕಲಾಕೃತಿಯನ್ನು ವಿಜಯ ಸಿಂದೂರ ಅವರ ಜೀವನ ಮತ್ತು ಕಲಾಕೃತಿಗಳು ಒಂದು ಅಧ್ಯಯನ ಎಂಬ ಅಪ್ರಕಟಿತ ಮಹಾ ಪ್ರಬಂಧದಿಂದ ಆಯ್ದುಕೊಳ್ಳಲಾದೆ.

### ೬. ಕಲಾವಿದನ ಕಲ್ಪನೆಯಲ್ಲಿ ವಿಘ್ನೇಶ್ವರ

ಜಮಖಂಡಿಯ ಕಲಾವಿದ ವಿಜಯ ಸಿಂದೂರ ಅವರು ರಚಿಸಿದ ಕಲಾಕೃತಿ ಇದಾಗಿದ್ದು ೧೯೮೬ರಲ್ಲಿ ರಚನೆಗೊಂಡಿದೆ.[೧೦] ಈ ಕಲಾಕೃತಿಯಲ್ಲಿ ಕಲಾವಿದನ ಕಲ್ಪನೆಯಂತೆ ಗಣೇಶನ ಚಿತ್ರ ರಚಿಸಿರುವುದನ್ನು ಕಾಣುತ್ತೇವೆ. ಬೋಳಾದ ತಲೆಯಂತೆ ಕಾಣುತ್ತಿದ್ದು, ಹಣೆಗೆ ಬಿಳಿಯ ಬಣ್ಣದಿಂದ ಅರ್ಧ ಚಂದ್ರನಂತೆ ರಚಿಸಿದ್ದು, ಸುಂದರವಾದ ಕಣ್ಣು, ಬಿಳಿಯ ಬಣ್ಣದಿಂದ ಕೂಡಿದ ದಂತ, ಎಡಭಾಗಕ್ಕೆ ತಿರುವಿಕೊಂಡಿರುವಂತ ಸೊಂಡಿಲು, ಎಡಕೈಯಲ್ಲಿ ಮೋದಕ, ಬಲಗೈಯಲ್ಲಿ ಅಭಯ ಹಸ್ತ, ಕೊರಳಿಗೆ ಸರವನ್ನು  ಮತ್ತು ದೊಡ್ಡ ಗಾತ್ರ ಹೊಟ್ಟೆ ಹೊಂದಿದ್ದು ತನ್ನ ಎರಡು ಕಾಲಗಳನ್ನು ಮಡಚಿಕೊಂಡು ಕುಳಿತಿದ್ದು ಸೊಂಟಕ್ಕೆ ಹಳದಿ ಮತ್ತು ಕೆಂಪು ಬಣ್ಣದ ವಸ್ತ್ರಗಳನ್ನು ತೊಟ್ಟಿದ್ದು ಗಣಪತಿಯ ಬಣ್ಣವನ್ನು ಕೆಂಪು ಮತ್ತು ಬಿಳಿಯ ಬಣ್ಣದಿಂದ ರಚಿಸಿದ್ದಾರೆ. ಹಿಂಭಾಗದಲ್ಲಿ ನೀಲಿ, ಹಳದಿ, ಕೆಂಪು ಮಿಶ್ರಿತವಾಗಿ ಮೈವಳಿಕೆಯನ್ನು ತೆಗೆದಿರುವುದನ್ನು ಕಾಣಬಹುದು. ಇದು ಕಲಾವಿದನ ಕಲ್ಪನೆಯಲ್ಲಿ ಮೂಡಿಬಂದಂತಹ ಕಲಾಕೃತಿಯಾಗಿದೆ.

### ೭. ಸೃಜನಾತ್ಮಕ ಗಣೇಶ

ಈ ಚಿತ್ರವನ್ನು ಕಲಾವಿದ ವಿಜಯ ಸಿಂದೂರ ಅವರದಾಗಿದ್ದೂ ಮೇಲಿನ ಕಲಾಕೃತಿ ರಚನೆಯ ವೇಳೆಯಲ್ಲಿ ರಚನೆಯಾಗಿದೆ.[೧೧] ಈ ಕಲಾಕೃತಿಯಲ್ಲಿ ಗಣೇಶನು ಕುಳಿತಿರುವುದನ್ನು ನೋಡಬಹುದಾಗಿದೆ. ಇಲ್ಲಿ ಕಲಾವಿದನು ಹಳದಿ, ಕೆಂಪು ಮತ್ತು ಬಿಳಿಯ ಬಣ್ಣಗಳಿಂದ ಈ ಕಲಾಕೃತಿಯನ್ನು ರಚಿಸಿದ್ದಾರೆ. ಇಲ್ಲಿ ಹಳದಿ ಬಣ್ಣದ ಹೊರ ರೇಖೆಗಳನ್ನು ಉಳಿಸಿಕೊಂಡು ಬಿಳಿಯ ಬಣ್ಣದ ದಂತಗಳನ್ನು ರಚಿಸಿದ್ದು, ಎಡಗೈಯಲ್ಲಿ ಮೋದಕವನ್ನು ಹಿಡಿದಿದ್ದು ಬಲಗೈಯನ್ನು ಅಭಯ ಹಸ್ತವಾಗಿ ತೋರಿಸಿದ್ದು ಮತ್ತು ದೊಡ್ಡ ಗಾತ್ರದ ಹೊಟ್ಟೆಯನ್ನು ಹೊಂದಿದ್ದು ಕಾಣಬಹುದು. ಕಲಾವಿದನು ಇಲ್ಲಿ ಚಿತ್ರಕ್ಕಿಂತ ಬಣ್ಣಗಳೊಂದಿಗೆ ಹೆಚ್ಚಿನ ಆಟವಾಡಿರುವುದನ್ನು ಇಲ್ಲಿ ಗಮನಿಸಬಹುದು. ಈ ಕಲಾಕೃತಿಯು ಕೂಡಾ ಆಧುನಿಕ ಕಾಲದಲ್ಲಿನ ಕಲಾವಿದನ ಸೃಜನಾತ್ಮಕತೆಯನ್ನು ಇಲ್ಲಿ ತೋರಿಸಿದ್ದಾರೆ. ಒಟ್ಟಾರೆಯಾಗಿ ಇಲ್ಲಿ ಗಣಪತಿಯ ಸ್ವರೂಪವನ್ನು ನೋಡಬಹುದು. ಇಂತಹ ಕಲಾಕೃತಿಗಳೆಡೆಗೆ ನೋಡುಗನ ದೃಷ್ಠಿಯನ್ನು ಆಕರ್ಷಿಸುತ್ತವೆ.

### ೮. ಕುಟುಂಬ ಸಮೇತ ನಂದಿಯ ಮೇಲೆ ಪ್ರಯಾಣ

ಈ ಕಲಾಕೃತಿಯು ೧೯೪೪ರಲ್ಲಿ ರಚನೆಯಾಗಿದ್ದು ೫X6 ಅಡಿ ಅಳತೆಯಲ್ಲಿದ್ದೂ ತೈಲವರ್ಣದಲ್ಲಿ ಹೀರಾಲಾಲ್ ಮಲ್ಕ್ ಎಂಬ ಕಲಾವಿದ ರಚಿಸಿದ್ದು ಈ ಕಲಾಕೃತಿಯಲ್ಲಿ ಈಶ್ವರನ ಕುಟುಂಬ ಸಮೇತರಾಗಿ ನಂದಿಯ ಮೇಲೆ ಪ್ರಯಾಣ ಮಾಡುತ್ತಿರುವುದನ್ನು ಕಾಣಬಹುದು ನಂದಿಯ

---

೧೦,೧೧. ಈ ಕಲಾಕೃತಿಯನ್ನು ಕಲಾವಿದ ವಿಜಯ ಸಿಂದೂರ ಅವರ ಜೀವನ ಮತ್ತು ಕಲಾಕೃತಿಗಳು ಎಂಬ ಅಪ್ರಕಟಿತ ಮಹಾ ಪ್ರಬಂಧದಿಂದ ಆಯ್ದುಕೊಳ್ಳಲಾಗಿದೆ.

ಮೇಲೆ ಪಾರ್ವತಿ, ಸುಬ್ರಹ್ಮಣ್ಯ, ಶಿವ ಕುಳಿತಿದ್ದು, ಮುಂದೆ ಗಣಪತಿಯು ಕುಳಿತಿದ್ದಾನೆ. ಸೊಂಡಿಲನ್ನು ಮುಂದಕ್ಕೆ ಚಾಚಿಕೊಂಡು ಹಣೆಗೆ ವಿಭೂತಿ ಪಟ್ಟಿಯನ್ನು ಹಚ್ಚಿಕೊಂಡಿದ್ದು, ವಿಭೂತಿಯ ಕೆಳಭಾಗದಲ್ಲಿ ಕುಂಕುಮದಿಂದ ವೃತ್ತಾಕಾರವಾಗಿ ರಚಿಸಿದ್ದು, ಸುಂದರವಾದ ಪುಟ್ಟ ಕಣ್ಣು, ಅಗಲವಾದ ಕಿವಿ, ಕಿರೀಟವನ್ನು ಬಂಗಾರ ಲೇಪನ ಮಾಡಿದಂತೆ ಕಾಣುತ್ತದೆ. ಕೊರಳಿಗೆ ಸರಗಳನ್ನು ಹಾಕಿಕೊಂಡಿದ್ದು, ಕೈಗಳಿಗೆ ಕೈಗಡಗ, ಕಾಲುಗಳಿಗೆ ಕಾಲಗಡಗ ಧರಿಸಿದ್ದು, ನೀಲಿ ಮಿಶ್ರಿತ ಬಿಳಿ ಮತ್ತು ಕೆಂಪು ಬಟ್ಟೆಯನ್ನು ತೊಟ್ಟಿರುವುದನ್ನು ಕಾಣುತ್ತೇವೆ. ನಂದಿಯನ್ನು ಕಂದು ಮತ್ತು ಹಳದಿ ಬಣ್ಣದಿಂದ ರಚಿಸಿದ್ದು, ಹಿಂಭಾಗದಲ್ಲಿ ದೇವಲೋಕದ ಸನ್ನಿವೇಶವನ್ನು ಕಾಣಬಹುದು. ಈ ಕಲಾಕೃತಿಯನ್ನು ನೋಡಿದಾಗ ಶಿವ ಪುರಾಣದ ಪ್ರಕಾರ ಪಾರ್ವತಿಯ ಮಗ ಗಜಾನನ ಎಂದು ಸೂಚಿಸುತ್ತದೆ. ಒಟ್ಟಾರೆಯಾಗಿ ಈ ಸಂಯೋಜನೆ ಉತ್ತಮವಾಗಿದೆ. ಈ ಕಲಾಕೃತಿಯು ರಾಯಚೂರಿನ ಚಂದ್ರಮೌಳೇಶ್ವರ ದೇವಸ್ಥಾನದ ಮುಖ್ಯದ್ವಾರದ ಬಲಬದಿಯಲ್ಲಿದೆ.[೧೨]

### ೯. ಯೋಗಾಸನದಲ್ಲಿ ಕುಳಿತ ಗಣೇಶ

ಈ ಕೃತಿಯು ೨೦೦೬ರಲ್ಲಿ ರಚನೆಯಾಗಿದ್ದೂ ೨X೧೧/೨ ಅಡಿ ಅಳತೆಯಲ್ಲಿದ್ದು ತೈಲವರ್ಣದಲ್ಲಿ ರಚನೆಯಾಗಿದೆ. ಈ ಕಲಾಕೃತಿಯಲ್ಲಿ ಗಣೇಶನು ಯೋಗದಲ್ಲಿ ನಿರತನಾಗಿರುವುದನ್ನು ಕಾಣುತ್ತೇವೆ. ಇಲ್ಲಿ ವಿಶೇಷವೆನೆಂದರೆ ಕಿರೀಟ ಇಲ್ಲದಿರುವುದು. ಮೈಬಣ್ಣ ಗುಲಾಬಿ, ಹಳದಿ, ಬಿಳಿ ಮಿಶ್ರಿತದಿಂದ ಕೂಡಿದ್ದು ಹಣೆಗೆ ಬಿಳಿಯ ವಿಭೂತಿ ಪಟ್ಟಿಯನ್ನು ಎಳೆದಿದ್ದು, ದೊಡ್ಡ ಗಾತ್ರದ ಕಿವಿಗಳನ್ನು ಹೊಂದಿರುವ ಮತ್ತು ಅರ್ಧ ಚಂದ್ರಾಕೃತಿಯಲ್ಲಿರುವಂತ ಕಣ್ಣಿನ ಹುಬ್ಬುಗಳು, ಸುಂದರವಾದ ಕಣ್ಣುಗಳು, ಒಂದು ದಂತ ಮೊಟಕಾಗಿರುವುದು ತನ್ನ ಸೊಂಡಿಲನ್ನು ಮಡಚಿಕೊಂಡಿದ್ದು, ಅದರೊಳಗಿನಿಂದ ಓಂ ಚಿಹ್ನೆಯು ಬಂದಂತೆ ಕಾಣುತ್ತೇವೆ. ಸೊಂಡಿಲಿನ ಮೇಲೆ ವಿನ್ಯಾಸ ರಚಿಸಿದ್ದಾರೆ. ಬಿಳಿಯ ಜನಿವಾರ ಹಾಕಿಕೊಂಡಿದ್ದು, ತನ್ನ ಎರಡು ಕೈಗಳನ್ನು ಒಂದರ ಮೇಲೊಂದು ಇಟ್ಟುಕೊಂಡಿದ್ದು, ತನ್ನ ಸೊಂಟಕ್ಕೆ ಹಳದಿ ಬಣ್ಣದ ಬಟ್ಟೆಯನ್ನು ಸುತ್ತಿಕೊಂಡಿರುವುದನ್ನು ಕಾಣುತ್ತೇವೆ. ತನ್ನ ಎರಡು ಕಾಲುಗಳನ್ನು ಒಂದರ ಮೇಲೊಂದು ಇಟ್ಟುಕೊಂಡು ಯೋಗಾಸನದಲ್ಲಿ ನಿರತವಾಗಿರುವುದನ್ನು ಕಾಣುತ್ತೇವೆ. ಗಣಪತಿ ಕೆಳಭಾಗದಲ್ಲಿ ವೃತ್ತಾಕಾರವಾದಂತಹ ವಿನ್ಯಾಸ ಹೊಂದಿದ್ದು, ದೇವಲೋಕ ಹಿನ್ನೆಲೆಯನ್ನು ನಾವು ಕಾಣಬಹುದಾಗಿದೆ. ಹಿಂಭಾಗದಲ್ಲಿ ನೀಲಿ, ಹಳದಿ, ಬಿಳಿ ಬಣ್ಣಗಳಿಂದ ಕೂಡಿದ್ದು, ಈ ಕಲಾಕೃತಿಯನ್ನು ಸುಂದರವಾಗಿ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಈ ಕಲಾಕೃತಿಯು ರಾಯಚೂರಿನ ಚಂದ್ರಮೌಳೇಶ್ವರ ದೇವಸ್ಥಾನದಲ್ಲಿ ಸಂಗ್ರಹಗೊಂಡಿದೆ.[೧೩]

---

೧೨,೧೩. ಈ ಕಲಾಕೃತಿಯು ಸಧ್ಯ ರಾಯಚೂರಿನ ಚಂದ್ರಮೌಳೇಶ್ವರ ದೇವಾಸ್ಥಾನದಲ್ಲಿ ಸಂಗ್ರಹಗೊಂಡಿದೆ.

## ೧೦. ಭಿತ್ತಿಚಿತ್ರದಲ್ಲಿ ಗಣೇಶ

ಈ ಭಿತ್ತಿಚಿತ್ರದಲ್ಲಿ ಗಣಪತಿಯು ಕುಳಿತಿರುವುದನ್ನು ನೋಡಬಹುದಾಗಿದೆ. ಗಣಪತಿಯ ಮುಖವು ಬಲಗಡೆ ಮಾಡಿಕೊಂಡು ತನ್ನ ಸೊಂಡಿಲನ್ನು ಹಾವಿನ ರೀತಿಯಲ್ಲಿ ಮಡಚಿಕೊಂಡಿರುವುದನ್ನು ಕಾಣುತ್ತೇವೆ. ಚೂಪಾದಂತಹ ದಂತದಿಂದ ಕೂಡಿದ್ದು, ಅಗಲವಾದ ಕಿವಿಗಳಿಂದ ಕೂಡಿವೆ. ಕಿರೀಟವು ಸುಂದರವಾಗಿದ್ದು, ಹಳದಿ ಬಣ್ಣದಿಂದ ಲೇಪಿಸಿದ್ದಾರೆ. ತನ್ನ ಕೊರಳಿಗೆ ವಿವಿಧ ರೀತಿಯ ಸರಗಳನ್ನು ಹಾಕಿಕೊಂಡಿದ್ದು, ನಾಲ್ಕು ಕೈಗಳನ್ನು ಹೊಂದಿದ್ದು, ತನ್ನ ಬಲಭಾಗದ ಕೈಗಳಲ್ಲಿ ಅಂಕುಶ ಮತ್ತೊಂದು ಕೈಯಲ್ಲಿ ಆಶಿರ್ವದಿಸುತ್ತಿದ್ದು, ಎಡಭಾಗದ ಕೈಗಳಲ್ಲಿ ಪಾಶ ಮತ್ತೊಂದು ಕೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದಿರುವ ದೃಶ್ಯವನ್ನು ಕಾಣಬಹುದಾಗಿದೆ. ತನ್ನ ಮೈ ಬಣ್ಣಗಳಿಂದ ಕಂದುಗೆಂಪು ಬಣ್ಣದಿಂದ ಲೇಪಿಸಿ ಬಟ್ಟೆಗಳನ್ನು ಹಳದಿ, ಕೆಂಪು ಬಣ್ಣಗಳಿಂದ ರಚಿಸಿದ್ದಾರೆ. ಹಿಂಭಾಗದಲ್ಲಿ ನೀಲಿ, ಹಸಿರು, ಕಪ್ಪು ಬಣ್ಣದಿಂದ ಕೂಡಿದ್ದು ಸುಂದರವಾಗಿದೆ.

**********



೦೧. ವೀರ ಗಣಪತಿ



೦೩. ಹಂಪಿಯಲ್ಲಿ ಗಣೇಶ



೦೨. ಸಂಗೀತದಲ್ಲಿ ನಿರತರಾದ ವಿನಾಯಕರು



೦೪. ಇಲಿಯ ಮೇಲೆ ಸವಾರಿ ಮಾಡುತ್ತಿರುವ ವಿನಾಯಕ

## ಕಲಾವಿದ ಬಸವರಾಜ ಗವಿಮಠರ ಕಲ್ಪನೆಯಲ್ಲಿ ಗಣೇಶ


ಡಾ. ಗುಟಖಾ ಗಣೇಶ 2002


ಮುಳ್ಳಿನ ಗಣೇಶ 2005


ನ್ಯೂಸ್ ಪೇಪರ ಗಣೇಶ 2004


ಕೀಲಿ ಗಣೇಶ 2006


ಶೆಲ್ಲಿನ ಗಣೇಶ 2007

## ಅಧ್ಯಾಯ – ಎಂಟು

# ಸಮಾರೋಪ

ಕಲೆಯು ಆದಿಮಾನವನಿಂದ ಆಧುನಿಕ ಕಾಲದವರೆಗೆ ವಿವಿಧ ರೀತಿಯಲ್ಲಿ ಬೆಳವಣಿಗೆ ಹೊಂದಿರುವುದನ್ನು ಆದಿಮಾನವನ ಗುಹಾ ಚಿತ್ರಗಳಿಂದ ಗುರುತಿಸಬಹುದಾಗಿದೆ. ಇಲ್ಲಿ ಚಿತ್ರಕಲೆ, ಶಿಲ್ಪಕಲೆ ಒಟ್ಟಿಗೆ ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ. ಕಲೆಯು ವಿವಿಧ ಕಾಲಘಟ್ಟಗಳಲ್ಲಿ ತನ್ನದೇ ಆದ ಸ್ವರೂಪವನ್ನು ಪಡೆದುಕೊಂಡು ಹಲವಾರು ಶೈಲಿಗಳಾಗಿ ರೂಪತಾಳಿದ್ದನ್ನು ಕಾಣಬಹುದಾಗಿದೆ. ಪ್ರಪಂಚದ ಆಯಾ ಸಂಸ್ಕೃತಿಗನುಗುಣವಾಗಿ, ಕಾಲಘಟ್ಟಕ್ಕನುಗುಣವಾಗಿ ಬೆಳೆದು ಬಂದಿರುವುದು ಶ್ಲಾಘನೀಯ. ಆದರೆ ಒಂದೊಂದು ದೇಶದ ಕಲೆಗಳು ತನ್ನದೇ ಆದ ಸ್ವರೂಪವನ್ನು ಪಡೆದುಕೊಂಡ ಹಾಗೆ ಭಾರತೀಯ ಕಲೆಯು ಕೂಡ ತನ್ನದೇ ಆದ ಸ್ವರೂಪವನ್ನು ಪಡೆದುಕೊಂಡಿದೆ. ಭರತ ಖಂಡದಲ್ಲಿ ಹಲವಾರು ಸಂಸ್ಕೃತಿಗಳು ನೆಲೆಯೂರಿವೆ. ಒಂದೊಂದು ಸಂಸ್ಕೃತಿಯಲ್ಲಿಯೂ ಭಿನ್ನವಾದ ಶೈಲಿ ಹುಟ್ಟಿಕೊಂಡು ತನ್ನದೇ ಆದ ವಿಭಿನ್ನ ರೀತಿಯಲ್ಲಿ ಕಲೆಯನ್ನು ಅಳವಡಿಸಿಕೊಂಡಿವೆ. ನಾಗರ, ವೇಸರ, ದ್ರಾವಿಡ ಹೀಗೆ ಬೇರೆ ಬೇರೆ ರೀತಿಯಲ್ಲಿ ಶೈಲಿಗಳು ಬೆಳೆದು ಬಂದಿವೆ.

ಭಾರತೀಯ ಕಲೆಯಲ್ಲಿ ಶಿಷ್ಟಕಲಾ ಪ್ರಕಾರ ಬೆಳೆದು ಬರಲಿಕ್ಕೆ ಹಲವಾರು ರಾಜವಂಶಗಳು ಪೋಷಿಸಿದವು. ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು, ಪಲ್ಲವ, ಚೋಳ, ರಾಷ್ಟ್ರಕೂಟ, ಮೊಗಲ, ಜೈನ, ಹೊಯ್ಸಳ ಮತ್ತು ವಿಜಯನಗರದ ಅರಸರು ಶಿಷ್ಟಪದ ಕಲಾ ಪ್ರಕಾರಗಳಲ್ಲಿ ಸಾಂಪ್ರದಾಯಕ ಚಿತ್ರ ಶಿಲ್ಪಗಳು ರಚನೆಯಾಗಿರುವುದು ಕಂಡುಬರುತ್ತದೆ. ಕಲೆಯಲ್ಲಿ ವಿಶಿಷ್ಟವಾದವುಗಳೆಂದರೆ ಚಿತ್ರ, ಶಿಲ್ಪ, ಸಾಹಿತ್ಯ. ಈ ಸಾಹಿತ್ಯ ಎಂಬುದರಲ್ಲಿ ಮೊದಲು ವೇದ ಸಾಹಿತ್ಯ. ಈ ವೇದ ಸಾಹಿತ್ಯವು ನಮ್ಮ ಜಾನಪದರ ಆಚರಣೆ, ನಂಬಿಕೆ, ದೇವರ ಕಲ್ಪನೆ ಮೇರೆಗೆ

ಈ ಸಾಹಿತ್ಯ ರಚನೆಯಾಗಿರುವುದು ಕಂಡುಬರುತ್ತದೆ. ಮುಂದೆ ಉಪನಿಷತ್ತುಗಳು, ಪುರಾಣಗಳು, ಉಪ ಪುರಾಣಗಳು ಹೀಗೆ ಹಲವಾರು ರೀತಿಯಲ್ಲಿ ಸಾಹಿತ್ಯ ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ. ಇಂತಹ ವೇದಗಳು, ಉಪನಿಷತ್ತುಗಳು, ಪುರಾಣಗಳ ಆಧಾರದ ಮೇಲೆ ನಮ್ಮ ಭಾರತೀಯ ಚಿತ್ರ ಮತ್ತು ಶಿಲ್ಪಕಲೆ, ವಾಸ್ತುಶಿಲ್ಪಗಳು ರಚನೆಯಾಗಿರುವುದು ಗೋಚರವಾಗುತ್ತದೆ.

ಭಾರತೀಯ ಚಿತ್ರ–ಶಿಲ್ಪಗಳು, ವೇದಗಳು, ಪುರಾಣಗಳ ಪ್ರಕಾರ ಹಲವಾರು ದೇವಾನುದೇವತೆಗಳ ಶಿಲ್ಪಗಳು ಮತ್ತು ಭಿತ್ತಿಚಿತ್ರಗಳು ರಚನೆಯಾಗಿರುವುದು ಕಂಡುಬರುತ್ತದೆ. ಆದರೆ ಇಂತಹ ಭಿತ್ತಿಚಿತ್ರ ಶಿಲ್ಪಗಳು ರಚನೆಯಾಗಿರುವುದಕ್ಕೆ ವಿವಿಧ ಗ್ರಂಥಗಳು ಮಾರ್ಗದರ್ಶನ ಮಾಡುತ್ತವೆ. ಮಾನಸೊಲ್ಲಾಸ, ಶಿವತತ್ವ ರತ್ನಾಕರ, ವಿಷ್ಣುಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರದಾರ, ಶಿಲ್ಪರತ್ನ ಹೀಗೆ ಹಲವಾರು ಗ್ರಂಥಗಳು ಮಾರ್ಗದರ್ಶನ ಮಾಡುತ್ತವೆ. ಈ ಮಾರ್ಗದರ್ಶನದ ಮೇರೆಗೆ ಶಿವ, ಪಾರ್ವತಿ, ವಿಷ್ಣು, ಬ್ರಹ್ಮ, ಲಕ್ಷ್ಮೀ, ಸರಸ್ವತಿ ವಿವಿಧ ದೇವರ ಚಿತ್ರ–ಶಿಲ್ಪಗಳು ರಚನೆಯಾಗಿರುವುದು ಕಂಡುಬರುತ್ತವೆ. ಆದರೆ ಇಂತಹ ದೇವಾನುದೇವತೆಗಳ ಚಿತ್ರ–ಶಿಲ್ಪಗಳಲ್ಲಿ ಕೆಲವು ವಿಶಿಷ್ಟ ದೇವರ ಶಿಲ್ಪಗಳು ರಚನೆಯಾಗಿರುವುದು ಕಂಡುಬರುತ್ತದೆ. ಗಣಪತಿ, ಮಾರುತಿ, ವಿಷ್ಣುವಿನ ಕೆಲವು ಅವತಾರಗಳಾದ ವರಾಹ, ನರಸಿಂಹ, ಮತ್ಸೆ, ಕೂರ್ಮ, ವಾಮನ ಹೀಗೆ ವಿವಿಧ ರೀತಿಯ ಕಾಲ್ಪನಿಕ ಶಿಲ್ಪಗಳಾದ ಯಾಳಿ, ಕೀರ್ತಿಮುಖ ಈ ರೀತಿಯಾದ ಶಿಲ್ಪ–ಚಿತ್ರಗಳು ರಚನೆಯಾಗಿರುವುದು ಕಂಡುಬರುತ್ತದೆ. ಆದರೆ ಈ ಎಲ್ಲಾ ಚಿತ್ರ–ಶಿಲ್ಪಗಳಲ್ಲಿ ಗಣೇಶನನ್ನು ವಿಶೇಷವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಗಣೇಶನು ತನ್ನೊಳಗೆ ಆನೆಯ ಮುಖವನ್ನು ಮೇಳೈಸಿಕೊಂಡು ವಿಶಿಷ್ಟ ದೇವನಾಗಿದ್ದಾನೆ. ಕಲಾವಿದರಿಗೆ ವಿಶಿಷ್ಟ ದೇವನಾಗಿ, ಕೃಷಿಕರಿಗೆ ಕೃಷಿ ದೇವನಾಗಿ, ಓದುಗರಿಗೆ ಜ್ಞಾನ ದೇವನಾಗಿ, ಬೇಡಿದವರಿಗೆ ಬೇಡಿದ ಫಲವನ್ನು ಕೊಡುವ ದೇವನಾಗಿ ರೋಗಿಗಳಿಗೆ ವಿಘ್ನನಿವಾರಕನಾಗಿ, ಹೆಣ್ಣುಮಕ್ಕಳಿಗೆ ಸಂತಾನವನ್ನು ಕೊಡುವ ದೇವನಾಗಿ ಗಣಪತಿಯು ಬೆಳೆದಿದ್ದಾನೆ. ಶಿವಪುರಾಣವು ಹೇಳುವಂತೆ ಗಣೇಶನು ಮಣ್ಣಿನ ಮಗ. ಆದರೆ ಈ ಗಣೇಶನು ವಿವಿಧ ಮಾಧ್ಯಮಗಳಲ್ಲಿ ರಚನೆಯಾಗುತ್ತಿರುವುದು ವಿಶೇಷ. ಗಣೇಶನು ಕಲಾವಿದರ ಸೃಜನಶೀಲತೆಯನ್ನು ಮೀರಿ ಬೆಳೆದಿದ್ದಾನೆ. ಈ ಆಧುನಿಕ ಯುಗದಲ್ಲಿ ಗಣೇಶನು ಹಲವಾರು ಅವತಾರಗಳಲ್ಲಿ ಮತ್ತು ವಿವಿಧ ರೂಪಗಳಲ್ಲಿ ರಚನೆಯಾಗುತ್ತಿರುವುದನ್ನು ಗಮನಿಸಿದರೆ ಗಣೇಶನ ರೂಪಗಳು ಲೆಕ್ಕವಿಲ್ಲದಷ್ಟು ಮುಂದುವರೆದಿದೆ. ಗಣೇಶನು ಕಲ್ಲು, ಕಟ್ಟಿಗೆ, ಕಬ್ಬಿಣ, ಕಂಚು, ಸಿಮೆಂಟ್, ಪ್ಲಾಸ್ಟರ ಆಫ್ ಪ್ಯಾರಿಸ್, ಮಣ್ಣು ಹೀಗೆ ಹಲವಾರು ಮಾಧ್ಯಮಗಳಲ್ಲಿ ರಚನೆಯಾಗುತ್ತಿದ್ದಾನೆ. ಚಿತ್ರಕಲೆಗಳಲ್ಲಿ ಗಣೇಶನನ್ನು ಹಲವಾರು ರೀತಿಯಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಕಲಾವಿದರು ಗಣೇಶನನ್ನು ವಿಷ್ಣುವಿನ ದಶಾವತಾರಗಳಲ್ಲಿ ಹಲವಾರು ಕರಕುಶಲ ಕಲೆಗಳಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಇನ್ನು ಮುಂದುವರೆದು ರಾಜಕೀಯದಲ್ಲಿ,

ಸ್ವಾತಂತ್ರ್ಯ ಹೋರಾಟಗಾರರ ಹಿನ್ನೆಲೆಯಲ್ಲಿ ಬಳಸಿಕೊಂಡಿರುವುದು ವಿಶೇಷವಾಗಿದೆ. ಶಿವಾಜಿ ಗಣೇಶ, ಬಾಲಗಂಗಾಧರ ತಿಲಕ ಗಣೇಶ ಹೀಗೆ ಕೆಲವು ಜಾಹಿರಾತುಗಳಿಗೆ ಬಳಸಿಕೊಂಡಿರುವುದು ಕಂಡುಬರುತ್ತದೆ.

ಪೌರಾಣಿಕ ಹಿನ್ನೆಲೆಯಿಂದ ನೋಡಿದಾಗ ಗಣೇಶನಿಗೆ ಹಲವಾರು ಹೆಸರುಗಳು ಬಂದಿವೆ. ವೇದ ಮತ್ತು ಉಪನಿಷತ್ತುಗಳಲ್ಲಿ ಗಣಪತಿ ಎಂಬ ಹೆಸರು ಬಂದರೂ, ಪುರಾಣಗಳಲ್ಲಿ ಗಣಪತಿಗೆ ಬದಲಾಗಿ ಜಗಮುಖ, ಲಂಬೋಧರ, ಗಣನಾಯಕ, ವಿನಾಯಕ, ವಿಘ್ನೇಶ್ವರ, ಏಕದಂತ, ಬೆನಕ ಹೀಗೆ ಹಲವಾರು ಹೆಸರುಗಳಿಂದ ಕರೆದಿರುವುದು ವಿಶೇಷವಾಗಿದೆ. ಈ ಹೆಸರುಗಳು ಬರುವುದಕ್ಕೆ ವಿವಿಧ ಕಥೆಗಳನ್ನು ಹೇಳುವುದರ ಜೊತೆಗೆ ಮುಗ್ದಲ ಪುರಾಣವು ಮೂವತ್ತೆರಡು ಗಣಪತಿಗಳ ವಿವರಣೆಯನ್ನು ನೀಡುತ್ತದೆ. ಈ ವಿವರಗಳನ್ನು ನೀಡುವಾಗ ಕೆಲವು ಗಣಪತಿಗೆ ಶಕ್ತಿಯನ್ನು ಸೇರಿಸಲಾಗಿದೆ. ಗಣೇಶನು ಪುರುಷ ರೂಪದಲ್ಲಿದ್ದಾನೆ ಎಂದು ಹೇಳುವಾಗ ಸ್ತ್ರೀ ರೂಪದಲ್ಲಿ ಇದ್ದಾನೆ ಎಂದು ಹೇಳುವುದರಲ್ಲಿ ಸಂದೇಹವಿಲ್ಲ. ಗಣಪತಿಗಳೊಡನೆ ಕಾಣಿಸಿಕೊಳ್ಳುತ್ತಿದ್ದ ಶಕ್ತಿಯೇ ರಹಸ್ಯ ಪೂಜೆಗಳ ಕಾಲದಲ್ಲಿ ಸ್ತ್ರೀ ಗಣಪತಿಯಾಗಿ ರೂಪಾಂತರವಾಗಿರಬಹುದು, ಈ ಸ್ತ್ರೀ ರೂಪಗಳನ್ನು ಕಲೆಗಳಲ್ಲಿ ಕಾಣಬಹುದು. ತಮಿಳುನಾಡಿನ ಕಾರೈಕುಡಿಯ ದೇಗುಲದ ಕಂಬವೊಂದರಲ್ಲಿ ವ್ಯಾಘ್ರಪಾದ ಗಣೇಶಾನಿ, ಕರ್ನಾಟಕದ ಕಿಕ್ಕೇರಿಯ ಹೊಯ್ಸಳ ದೇಗುಲದಲ್ಲಿರುವ ಗಣೇಶಾನಿ (ದೇಗುಲದ ಮದನಿಕಾ ವಿಗ್ರಹವೊಂದರ ಪೀಠದ ಅಡಿಯಲ್ಲಿದೆ) ಇವು ಇದಕ್ಕೆ ಉದಾಹರಣೆಯಾಗಿವೆ. ಈ ರೀತಿಯಾಗಿ ಗಣೇಶನು ಎಲ್ಲ ಕಲಾರಂಗಗಳಲ್ಲಿ ಬೆಳೆದು ಬಂದವನಾಗಿದ್ದಾನೆ. ಇವೆಲ್ಲವುಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಈ ಹಿನ್ನೆಲೆಯಲ್ಲಿ ದೃಶ್ಯಕಲೆಯಲ್ಲಿ ಗಣೇಶ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ಕಿರು ಪ್ರಬಂಧವನ್ನು ರಚಿಸಲಾಗಿದೆ. ಈ ಕಿರು ಪ್ರಬಂಧವನ್ನು ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಯಾವ ಉದ್ದೇಶಕ್ಕಾಗಿ ಈ ವಿಷಯವನ್ನು ಆಯ್ಕೆ ಮಾಡಿಕೊಂಡಿರುವುದು, ಎಲ್ಲ ಅಧ್ಯಾಯಗಳ ಸ್ವರೂಪ ಮತ್ತು ನಾನು ಆಯ್ದುಕೊಂಡಿರುವ ವಿಷಯದ ವ್ಯಾಪ್ತಿ ಮತ್ತು ಅದರ ವಿಧಾನವನ್ನು ತಿಳಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಐತಿಹಾಸಿಕ ಹಿನ್ನೆಲೆ ಗಣೇಶನು ಬೆಳೆದುಬಂದ ಬಗೆ, ಐತಿಹಾಸಿಕ ಆಧಾರಗಳು, ವೇದ ಮತ್ತು ಉಪನಿಷತ್ತುಗಳು, ಗಣೇಶನ ಕುರಿತು ಪ್ರಸ್ತಾವ, ಅವನ ಹುಟ್ಟಿನ ಬಗೆಗೆ ಹೇಳುವ ಪುರಾಣಗಳು ಮತ್ತು ಮೂವತ್ತೆರಡು ಗಣೇಶನ ರೂಪಗಳನ್ನು ಹೇಳುವ ಮಗ್ದಲ ಪುರಾಣದ ವಿವರಣೆಯನ್ನು ನೀಡಲಾಗಿದೆ. ಮುಂದೆ ದೃಶ್ಯಕಲೆಗಳ ವೈವಿಧ್ಯತೆ ದೃಶ್ಯಕಲೆಗಳು, ಲಲಿತಕಲೆಗಳು, ಲಲಿತೇತರ ಕಲೆಗಳ ಅಧ್ಯಯನ ಮತ್ತು ಕರಕುಶಲ ಕಲೆಗಳು ಹೀಗೆ ದೃಶ್ಯಕಲೆಗಳ

ವೈವಿಧ್ಯತೆಯನ್ನು ಮಾಡಲಾಗಿದೆ. ಪ್ರಾಗೈತಿಹಾಸಿಕ ಕಾಲದಿಂದ ಆಧುನಿಕ ಕಾಲದವರೆಗೆ ದೃಶ್ಯಕಲೆಗಳು ಬೆಳೆದುಬಂದ ಹರವನ್ನು ನೀಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಮಣ್ಣಿನ ಮಾಧ್ಯಮದಲ್ಲಿ ಗಣೇಶನ ಶಿಲ್ಪಗಳನ್ನು ವಿವರಿಸಲಾಗಿದೆ. ಗಣೇಶನು ಮಣ್ಣಿನಲ್ಲಿ ಹುಟ್ಟಿದ ವಿವರಣೆ ನೀಡುವುದರ ಜೊತೆಗೆ ಶಿವಪುರಾಣದ ಪ್ರಕಾರ ಗಣೇಶ ಹೇಗೆ ರಚನೆಯಾದ ಎಂಬುದರ ಬಗ್ಗೆ ವಿವರಣೆಗಳಿವೆ. ಮತ್ತು ಮಣ್ಣಿನ ಮಾಧ್ಯಮದಲ್ಲಿ ರಚನೆಯಾದ ಶಿಲ್ಪಗಳ ವಿಶ್ಲೇಷಣೆಯನ್ನು ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಶಿಲಾ ಮಾಧ್ಯಮದಲ್ಲಿ ರಚನೆಯಾದ ಗಣೇಶನ ಶಿಲ್ಪಗಳ ವಿಶ್ಲೇಷಣೆ ಇದೆ. ಶಿಲಾ ಮಾಧ್ಯಮದ ಶಿಲ್ಪಗಳು ಎಲ್ಲಿಂದ ರಚನೆಯಾಗಿವೆ ಮತ್ತು ಗಣೇಶನ ಮೂಲ ಶಿಲ್ಪದ ಇತಿಹಾಸ, ಕರ್ನಾಟಕದಲ್ಲಿ ಗಣೇಶನ ಮೂಲ ಶಿಲ್ಪವಿರುವುದು ಇಡಗುಂಜಿ ಬಾದಾಮಿ ಚಾಲುಕ್ಯರ ಕಾಲದ ವಾತಾಪಿ ಗಣಪತಿ ಮತ್ತು ವಿಜಯನಗರದಲ್ಲಿ ಗಣೇಶನ ಶಿಲ್ಪಗಳು ರಚನೆಯಾಗಿರುವ ಉದಾಹರಣೆ ಮತ್ತು ವಿಜಯನಗರದ ಅರಸರು ನೀಡಿದ ಪ್ರೋತ್ಸಾಹವನ್ನು ವಿಶ್ಲೇಷಿಸಲಾಗಿದೆ. ಆಧುನಿಕ ಶಿಲ್ಪಕಲೆಯ ಮಾಹಿತಿ ನೀಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಭಿತ್ತಿ ಮಾಧ್ಯಮದಲ್ಲಿ ಗಣೇಶನ ಚಿತ್ರ-ಶಿಲ್ಪಗಳು, ಭಿತ್ತಿಚಿತ್ರಕಲೆಯ ಹಿನ್ನೆಲೆ, ಗವಿಮಾನವನ ಕಾಲದ ಭಿತ್ತಿಚಿತ್ರಗಳು, ಗುಹಾಂತರ ದೇವಾಲಯಗಳ ಭಿತ್ತಿಚಿತ್ರಗಳು ಮತ್ತು ಅರಮನೆ, ಮಠ, ಶ್ರೀಮಂತರ ಮನೆಗಳಲ್ಲಿ ರಚನೆಯಾದ ಭಿತ್ತಿಚಿತ್ರಗಳು, ಭಿತ್ತಿಶಿಲ್ಪಗಳು, ಆಧುನಿಕ ಭಿತ್ತಿಶಿಲ್ಪಗಳ ಬಗ್ಗೆ ವಿವರಣೆ ಇದೆ. ಮತ್ತು ಕಲಾಕೃತಿಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಮರ/ಕಟ್ಟಿಗೆ ಮಾಧ್ಯಮದಲ್ಲಿ ರಚನೆಯಾದ ಗಣೇಶನ ಶಿಲ್ಪಗಳ ಕುರಿತು ವಿಶ್ಲೇಷಿಸಲಾಗಿದೆ. ಮರ ಮಾಧ್ಯಮದ ಹಿನ್ನೆಲೆ, ಮರ ಮಾಧ್ಯಮದಲ್ಲಿ ರಚನೆಯಾದ ಸಾಂಪ್ರದಾಯಿಕ ಗಣೇಶನ ಶಿಲ್ಪಗಳು, ರಥ ಶಿಲ್ಪಗಳ ಮಾಹಿತಿ ಅಲ್ಲಿಯ ಶಿಲ್ಪಗಳ ರಚನೆ, ಆಧುನಿಕ ಕಾಲದಲ್ಲಿ ಬಾಗಿಲುಗಳ ಮೇಲೆ ಸೌಂದರ್ಯಕ್ಕಾಗಿ ಗಣೇಶನ ಶಿಲ್ಪಗಳ ಮಾಹಿತಿ ಮತ್ತು ಇನ್ನುಳಿದ ಕಲೆಗಳಾದ ಕಿನ್ನಾಳ ಮತ್ತು ಕಲಘಟಗಿಯ ಕಲೆಯಲ್ಲಿ ಕಟ್ಟಿಗೆಯಲ್ಲಿ ರಚನೆಯಾದ ಗಣೇಶನ ಶಿಲ್ಪಗಳ ಮಾಹಿತಿಯನ್ನು ನೀಡಲಾಗಿದೆ. ಮತ್ತು ಶಿಲ್ಪಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಮತ್ತು ಇನ್ನಿತರ ಮಾಧ್ಯಮಗಳಾದ ಕಂಚು, ಸಿಮೆಂಟ್, ಪ್ಲಾಸ್ಟರ್ ಆಫ್ ಪ್ಯಾರಿಸ್ ಮಾಧ್ಯಮಗಳ ಕಲಾಕೃತಿಗಳನ್ನು ಅಧ್ಯಯನ ಮಾಡಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಸಮಕಾಲೀನ ಸಂದರ್ಭದಲ್ಲಿ ಗಣೇಶೋತ್ಸವ ಹಾಗೂ ಚಿತ್ರ-ಶಿಲ್ಪಗಳು ಮತ್ತು ಕಲಾವಿದರ ಅಧ್ಯಯನ ಮಾಡಲಾಗಿದೆ. ಸಮಕಾಲೀನ ಸಂದರ್ಭದಲ್ಲಿ ಗಣೇಶೋತ್ಸವದ ಮಾಹಿತಿ, ಕೂಡಿಸುವ ವಿಧಾನ, ಪೂಜಾ ವಿಧಾನ, ದಿನಗಳು ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಗಣೇಶನಿಗೆ ಸಂಬಂಧಿಸಿದ ಹಾಡುಗಳು ಮತ್ತು ಗಣೇಶನ ಹಬ್ಬಕ್ಕೆ

ರಚನೆಯಾಗುವ ಚಿತ್ರ–ಶಿಲ್ಪಗಳ ವಿಶ್ಲೇಷಣೆಯನ್ನು ಮಾಡಲಾಗಿದೆ. ಅದರ ಜೊತೆಗೆ ಗಣೇಶನ ಚಿತ್ರ–ಶಿಲ್ಪಗಳನ್ನು ಮಾಡಿರುವ ಮಾಡುತ್ತಿರುವವರ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ. ಕೆಲವು ಕಲಾವಿದರ ಕಲಾಕೃತಿಗಳನ್ನು ವಿಶ್ಲೇಷಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಎಲ್ಲ ಅಧ್ಯಾಯಗಳಲ್ಲಿ ಕಂಡುಕೊಂಡ ಫಲಿತಾಂಶಗಳ ಸಮಾರೋಪವಿರುತ್ತದೆ. ನಂತರ ಗ್ರಂಥಋಣ, ಸಂಕ್ಷೇಪಗಳು, ವಕ್ತೃಗಳು ಹೀಗೆ ಅಧ್ಯಯನಕ್ಕೆ ಅಳವಡಿಸಲಾಗಿದೆ.

**********

## ಪ್ರಸ್ತುತ ಅಧ್ಯಯನದ ಕೆಲವು ಪ್ರಮುಖ ಫಲಿತಗಳು

* ಕಲೆ ಬೆಳೆದು ಬಂದ ಬಗೆ, ವಿವಿಧ ಕಲಾ ಪ್ರಕಾರಗಳು, ದೃಶ್ಯ ಕಲೆಗಳ ಆಗಮನ, ವಸ್ತುವಿಷಯಗಳು ಮತ್ತು ಕಿರು ಪ್ರಬಂಧದ ರಚನಾ ವಿಧಾನ

* ಗಣೇಶ ಕುರಿತು ಕೆಲವು ಗ್ರಂಥಗಳ ಅಧ್ಯಯನ, ಅವನ ಹುಟ್ಟು, ದೃಶ್ಯಕಲೆಗಳ ವೈವಿಧ್ಯತೆ, ಮಿಶ್ರಮಾಧ್ಯಮಗಳು, ದೃಶ್ಯಕಲೆಯ ಕುರಿತ ಇನ್ನಿತರ ಗ್ರಂಥಗಳ ಅಧ್ಯಯನ ಅವಶ್ಯಕ

* ಕಲೆಯ ಹರವು, ಪ್ರಾಗೈತಿಹಾಸಿಕ ಕಾಲದಿಂದ ಇಲ್ಲಿಯವರೆಗೆ ಬೆಳೆದು ಬಂದ ಕಲೆಯ ಅಧ್ಯಯನ ಮಾಡುವುದು ಸೂಕ್ತ

* ಮೂರ್ತಿ ತಯಾರಿಕೆಯಲ್ಲಿ ಮಣ್ಣು ಮೊದಲು ಬಳಕೆಯಾದದ್ದು, ಶಿವ ಪುರಾಣದ ಪ್ರಕಾರ ಗಣೇಶನ ಮೂರ್ತಿಶಿಲ್ಪ ತಯಾರಿಕೆಯಲ್ಲಿ. ಆದರೆ ನಮಗೆ ಸ್ಪಷ್ಟ ಮಾಹಿತಿ ಸಿಗುವುದು ಹರಪ್ಪ ಮತ್ತು ಮಹೆಂಜೋದಾರೋ ಉತ್ಕನನದಲ್ಲಿ ದೊರೆತ ಮಾತೃ ದೇವತೆಯ ಮುದ್ರೆ, ಶಿಲ್ಪ ಮತ್ತು ಆಟಿಕೆ ಸಾಮಾನುಗಳು ಮನದಟ್ಟು ಮಾಡಿವೆ. ಆದರೆ ವಿದ್ವಾಂಸರ ಪ್ರಕಾರ ಕ್ರಿಪೂ. ೨೫೦೦ ವರ್ಷಗಳ ಹಿಂದಿನದೆಂದು ಅಂದಾಜು ಮಾಡಲಾಗಿದೆ

* ಗಣೇಶನ ಕುರಿತ ಪುರಾಣಗಳು, ವೇದಗಳು ಮತ್ತು ಉಪನಿಷತ್ತುಗಳ ಅಧ್ಯಯನ ಅವಶ್ಯವಾದುದಾಗಿದೆ.

* ಗಣೇಶನನ್ನು ಶಿಲ್ಪಗಳಲ್ಲಿ ಪುರುಷ ರೂಪಗಳನ್ನು ಕಂಡಿರುವುದಲ್ಲದೆ, ಸ್ತ್ರೀ ರೂಪಗಳನ್ನು ಕಂಡಿಸಲಾಗಿದೆ.

* ಗಣೇಶನು ಚಿತ್ರ-ಶಿಲ್ಪಗಳಲ್ಲಿ ಕಲಾವಿದರ ಸೃಜನಾತ್ಮಕತೆಯನ್ನು ಕಂಡಿರುವುದು ವಿಶೇಷವಾಗಿದೆ.

* ಗಣೇಶನು ಕಲೆಯಲ್ಲಿ ಎಷ್ಟು ವಿಸ್ತಾರವಾಗಿದ್ದಾನೆ ಎನ್ನುವುದನ್ನು ಕಂಡುಕೊಳ್ಳಲಾಗಿದೆ.

* ಈ ರೀತಿಯಾದ ಅಧ್ಯಯನ ಮಾಡುವುದರಿಂದ ಹಲವಾರು ಕಲೆಗಳು, ಗ್ರಂಥಗಳ ವಿಷಯಗಳು, ಸೃಜನಾತ್ಮಕ ಕಲಾಕೃತಿಗಳು ಅನಾವರಣಗೊಳ್ಳುತ್ತವೆ.

* ಭಿತ್ತಿಚಿತ್ರದ ನೆಲೆ ಹಿನ್ನೆಲೆ, ಭಿತ್ತಿಯ ಪರಿಚಯ, ಭಿತ್ತಿಚಿತ್ರ ರಚನೆಗೆ ಪೂರಕವಾದ ಗ್ರಂಥಗಳ ಅಧ್ಯಯನ ಮತ್ತು ಆಧುನಿಕ ಭಿತ್ತಿಶಿಲ್ಪಗಳ ಉಗಮ ತಿಳಿಯಲಾಗಿದೆ.

* ಗಣೇಶನ ಶಿಲ್ಪಗಳು ಕಲ್ಲಿನಲ್ಲಿ ಅಷ್ಟೇ ಅಲ್ಲದೇ ಕಬ್ಬಿಣ, ಕಂಚು, ಸಿಮೆಂಟ್, ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ರಚನೆಯಾಗುತ್ತಿರುವುದನ್ನು ತಿಳಿಯಲಾಗಿದೆ.

* ಗಣೇಶನ ಶಿಲ್ಪಗಳು ರಥಗಳ ಮೇಲೆ, ಬಾಗಿಲುಗಳ ಮೇಲೆ, ಬಾಗಿಲ ಪಟ್ಟಿಕೆಗಳ ಮೇಲೆ ರಚನೆಯಾಗಿರುವುದನ್ನು ಕಾಣಬಹುದು.

* ಮುಗ್ದಲ ಪುರಾಣದಲ್ಲಿ ಬರುವ ಮೂವತ್ತೆರಡು ಗಣಪತಿಯ ರೂಪಗಳ ಅಧ್ಯಯನ ಮಾಡಲಾಗಿದೆ.

* ಗಣೇಶನನ್ನು ಹಲವಾರು ಕಲೆಗಳಲ್ಲಿ ಬಳಸಿಕೊಂಡಿರುವುದು ವಿಶೇಷ.

* ಗಣೇಶನ ಚಿತ್ರ–ಶಿಲ್ಪಗಳನ್ನು ಕಿನ್ನಾಳ ಮತ್ತು ಕಲಘಟಗಿ ಕರಕುಶಲ ಕಲೆಯಲ್ಲಿ ಬಳಸಿಕೊಳ್ಳಲಾಗಿದೆ.

* ೧೮೯೧ರಲ್ಲಿ ನವ್ಯ ಶಿಲ್ಪ ಕಲೆಗಳ ರಚನೆ ಪ್ರಾರಂಭ.

* ಕಲಾವಿದರು ಗಣೇಶನನ್ನು ಹಲವಾರು ಅವತಾರಗಳಲ್ಲಿ ಮತ್ತು ರೂಪಗಳಲ್ಲಿ ರಚಿಸಿರುವುದನ್ನು ಕಂಡುಕೊಳ್ಳಲಾಗಿದೆ.

* ಗಣೇಶನ ಕೈಯಲ್ಲಿ ಎಲ್ಲ ದೇವರುಗಳ ಆಯುಧಗಳನ್ನು ರಚಿಸಿರುವುದನ್ನು ಕಾಣಲಾಗಿದೆ.

* ಮುಗ್ದಲ ಪುರಾಣದಲ್ಲಿ ಹೇರಂಬ ಗಣಪತಿಗೆ ಸಿಂಹ ವಾಹನ ಇದೆ. ಆದರೆ ಆಧುನಿಕ ಕಾಲದಲ್ಲಿ ಗಣೇಶನಿಗೆ ನಂದಿ, ಮೊಸಳೆ, ಕತ್ತೆ, ಇಲಿ, ಕುದುರೆ, ವರಾಹ ಹೀಗೆ ಅನೇಕ ವಾಹನಗಳನ್ನು ರಚಿಸಿರುವುದು ವಿಶೇಷವಾಗಿದೆ.

* ಗಣೇಶನಿಗೆ ಸಂಬಂಧಿಸಿದಂತೆ ರಚನೆ ಮಾಡಿದ ಹಲವಾರು ಕಲಾವಿದರ ಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

* ಗಣೇಶನ ಚಿತ್ರ ಬಿಡಿಸದ ಕಲಾವಿದನೇ ಇಲ್ಲ ಎಂಬುದನ್ನು ಅಧ್ಯಯನದಿಂದ ತಿಳಿಯಲಾಗಿದೆ.

* ಗಣೇಶನ ಚಿತ್ರ–ಶಿಲ್ಪ, ಭಿತ್ತಿಚಿತ್ರ ಅಷ್ಟೇ ಅಲ್ಲದೇ ಹಸ್ತಪ್ರತಿಗಳಲ್ಲಿ ಮತ್ತು ಪಟ ಚಿತ್ರಗಳಲ್ಲಿ ಕಾಣಬಹುದು.

* ಗಣೇಶನು ಮಕ್ಕಳಿಗೆ ಮೊದಲ ವಿದ್ಯಾ ದೇವತೆ.

* ಗಣೇಶನ ಉತ್ಸವವನ್ನು ಇನ್ನಿತರ ಉತ್ಸವಗಳಂತೆ ಆಚರಿಸುವುದು ವಿಶೇಷವಾಗಿದೆ.

* ಗಣೇಶನು ಯಾವ ಧರ್ಮಕ್ಕೂ ಸೀಮಿತವಾದವನಲ್ಲ. ಗಣಪತಿಯ ಆಚರಣೆಯನ್ನು ಎಲ್ಲ ಧರ್ಮದವರು ಆಚರಿಸುತ್ತಾರೆ. ಗಣೇಶನ ಆಚರಣೆಯೂ ಭಾರತದಲ್ಲದೇ ಇತರ ದೇಶಗಳಲ್ಲಿ ಆಚರಿಸುವುದು ವಿಶೇಷ.

* ಗಣೇಶನು ಬ್ರಹ್ಮಚಾರಿ ಎಂದು ಹೇಳುತ್ತಾರೆ. ಆದರೆ ಗಣೇಶನನ್ನು ಕುರಿತು ಮೂವತ್ತೆರಡು ರೂಪಗಳನ್ನು ಪ್ರತಿಬಿಂಬಿಸುವ ಮುಗ್ದಲ ಪುರಾಣವೊಂದಿದೆ. ಈ ಪುರಾಣದಲ್ಲಿ ಗಣೇಶನಿಗೆ ಶಕ್ತಿಯನ್ನು

ಸೇರಿಸಿ ರಚಿಸಿರುವುದುಂಟು. ಮತ್ತು ಕೆಲವು ದೇವಾಲಯಗಳಲ್ಲಿ ಸ್ತ್ರೀ ರೂಪ ಕೊಟ್ಟು ರಚಿಸಿರುವುದುಂಟು. ಅದೇ ರೀತಿಯಾಗಿ ಕೆಲವು ಗ್ರಂಥಗಳಲ್ಲಿ ಗಣೇಶನಿಗೆ ಸಿದ್ಧ–ಬುದ್ಧಿ ಎಂಬ ಇಬ್ಬರು ಸತಿಯರಿದ್ದ ಪ್ರಸ್ತಾಪ ಬರುತ್ತದೆ.

* ಶಿವಪುರಾಣದ ಪ್ರಕಾರ ಗಣೇಶನು ಶಿವನಿಂದ ಅಗ್ರ ಪೂಜೆಗೊಳ್ಳುವ ವರವನ್ನು ಪಡೆದ ವಿವರಣೆ ಇದೆ.

* ಗಣೇಶನನ್ನು ನಾನಾ ಹೆಸರುಗಳಿಂದ ಕರೆದಿರುವುದು ವಿಶೇಷ. ಗಣೇಶ, ಗಣಪ, ವಿಘ್ನ ನಿವಾರಕ, ಗಜಾನನ, ಲಂಬೋಧರ, ಗಣನಾಯಕ, ಬೆನಕ, ಓಂಕಾರ ಸ್ವರೂಪಿ, ಗಜವದನ, ಗೌರಿಸುತ, ಪಾರ್ವತಿ ಪುತ್ರ, ಜಗಮುಖ ಹೀಗೆ ಹಲವಾರು ಹೆಸರುಗಳಿಂದ ಕರೆದಿರುವುದು ವಿಶೇಷ.

* ಹಲವು ಶತಮಾನಗಳ ಹಿಂದೆ ಕಲಾವಿದನಿಗೆ ಇಂತಹ ಶಿಲ್ಪಗಳ ಸೃಜನಾತ್ಮಕತೆಯ ಬಗೆಗೆ ಕಲ್ಪನೆ ಇರುವುದು ಕಂಡುಬರುತ್ತದೆ.

* ಕಲೆಯ ಮೂಲ ಉದ್ದೇಶ, ಆನಂದ ಮತ್ತು ಸಂತೋಷವನ್ನು ಕೊಡುವುದು ಇಂತಹ ಕಲೆಗಳ ಕುರಿತು ಅಧ್ಯಯನ ಮಾಡುವುದು ಸೂಕ್ತವೆನಿಸುತ್ತದೆ.

* ಗಣೇಶನ ಚಿತ್ರ–ಶಿಲ್ಪಗಳ ಕುರಿತು ಸಾಕಷ್ಟು ಹರವು ಇರುವುದರಿಂದ ಗಣೇಶನ ಚಿತ್ರ–ಶಿಲ್ಪಗಳ ಕುರಿತು ಅಧ್ಯಯನ ಮಾಡಬಹುದಾಗಿದೆ.

* ಸಮಕಾಲೀನ ಸಂದರ್ಭದಲ್ಲಿ ರಚನೆಯಾಗುತ್ತಿರುವ ಗಣೇಶನ ಚಿತ್ರ–ಶಿಲ್ಪಗಳ ಕುರಿತು ಅಧ್ಯಯನ ಮಾಡಬಹುದು.

* ಗಣೇಶನ ಚಿತ್ರಗಳು ಗಂಜೀಪಾ, ಗಾಜಿನ ಮೇಲಿನ ಚಿತ್ರಗಳು, ಕಲಘಟಗಿ, ಕಿನ್ನಾಳ, ಮೈಸೂರು, ಕರಾವಳಿ ಕಾವಿಕಲೆ ಹೀಗೆ ಹಲವಾರು ಕಲೆಗಳಲ್ಲಿ ರಚನೆಯಾಗುತ್ತಿರುವುದು ವಿಶೇಷವಾಗಿದೆ.

* ಉತ್ತರ ಕರ್ನಾಟಕದ ಮನೆಗಳಲ್ಲಿ ಗಣೇಶನನ್ನು ಕೂಡಿಸುವುದಕ್ಕೆ ಪ್ರತ್ಯೇಕ ಮಾಡುಗಳನ್ನು ಮಾಡಿರುತ್ತಾರೆ.

* ಗಣೇಶನ ಆಚರಣೆಯು ಬಾಲಗಂಗಾಧರ ತಿಲಕರವರಿಂದ ಪ್ರಾರಂಭವಾಯಿತು.

* ಭಾರತದಲ್ಲಿ ಮೊಟ್ಟಮೊದಲು ಗಣಪತಿಯ ಸಾರ್ವಜನಿಕ ಆಚರಣೆಯು ಮಹಾರಾಷ್ಟ್ರದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ಪ್ರಾರಂಭವಾಯಿತು.

* ಗಣಪತಿಯನ್ನು ಒಬ್ಬ ದೇವನಾಗಿ ಮತ್ತು ಸೌಂದರ್ಯತೆಯ ಹಿನ್ನೆಲೆಯಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ.

## ಪರಾಮರ್ಶನ ಗ್ರಂಥಗಳು


೧. ಕರ್ನಾಟಕದ ಜನಪದ ಚಿತ್ರಕಲೆ, ವಿರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯ ಸಂಸ್ಥಾನ ಮಠ, ಗದಗ, ಡಂಬಳ — ೧೯೯೩ — ಡಾ.ಎಸ್.ಸಿ.ಪಾಟೀಲ,

೨. ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ — ೨೦೦೦ — ಡಾ. ಯಾದಪ್ಪ ಪರದೇಶಿ,

೩ ಉತ್ತರ ಕರ್ನಾಟಕದ ಜನಪದ ಚಿತ್ರಕಲೆ, ಕನ್ನಡ ವಿ.ವಿಗೆ ಮಂಡಿಸಿದ ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ — ೨೦೦೨ — ಡಾ.ಎಸ್.ಎಚ್.ಬಂಟನೂರ,

೪. ಕರ್ನಾಟಕದ ಭಿತ್ತಿಚಿತ್ರ ಪರಂಪರೆ, ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು — ೧೯೯೮ — ನರಸಿಂಹನ್ ಅ.ಲ.

೫. ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ ಕನ್ನಡ.ವಿ.ವಿ. — ೧೯೯೬ — ಪ್ರೊ. ಹಿ.ಚಿ. ಬೋರಲಿಂಗಯ್ಯ,

೬ ಕರಕುಶಲ ಕಲೆಗಳು, ಪ್ರಸಾರಾಂಗ, ಕನ್ನಡ.ವಿ.ವಿ. — ೨೦೦೦ — (ಸಂ) ಕರಿಗೌಡ ಬೀಚನಹಳ್ಳಿ,

೭ ಕಿನ್ನಾಳ ಕಲೆ, ಎಂ.ಫಿಲ್ ಕಿರು ಪ್ರಬಂಧ .ವಿ.ವಿ.ಹಂಪಿ — ೨೦೦೬ — ರವಿ ನಾಯಕ

೮. ನಿಜದ ನೆಲೆ, ಅಭಿನಂದ ಗ್ರಂಥ,ಡಾ. ಬಿ.ಕೆ. ಹಿರೇಮಠ, ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟೆ — ೨೦೦೩ — (ಸಂ) ಡಾ. ಎಸ್.ಸಿ. ಪಾಟೀಲ, ಸತ್ಯಾನಂದ ಪಾತ್ರೋಟಿ,

೯. ಭಾರತೀಯ ಚಿತ್ರಕಲೆ, ನ್ಯಾಷನಲ್ ಬುಕ್‌ಟ್ರಸ್ಟ್ ಇಂಡಿಯಾ — ೧೯೯೮ — ಸಿ. ಶಿವರಾಮಮೂರ್ತಿ

೧೦. ಚಿತ್ರಕಲಾ ಪ್ರಪಂಚ ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು — ೧೯೯೩ — (ಪ್ರ.ಸಂ) ಪಿ.ಆರ್.ತಿಪ್ಪೇಸ್ವಾಮಿ (ಸಂ), ಅ.ಲ. ನರಸಿಂಹನ್ ಎನ್.ಮರಿಶಾಮಾಚಾರ್

| | | | |
|---|---|---|---|
| ೧೧. | ಶಿಲ್ಪಕಲಾ ಪ್ರಪಂಚ<br>ಕರ್ನಾಟಕ ಲಲಿತಕಲಾ<br>ಅಕಾಡೆಮಿ<br>ಬೆಂಗಳೂರು | ೧೯೯೪ | (ಪ್ರ.ಸಂ), ಪಿ. ತಿಪ್ಪೇಸ್ವಾಮಿ<br>(ಸಂ) ಆ.ಲ. ನರಸಿಂಹನ್<br>ಎನ್.ಮರಿಶಾಮಾಚಾರ್ |
| ೧೨ | ಶಿಲ್ಪಕಲೆ<br>ಕರ್ನಾಟಕ ಲಲಿತಕಲಾ<br>ಅಕಾಡೆಮಿ,<br>ಬೆಂಗಳೂರು | ೧೯೯೫ | ವಿಜಯಾರಾವ್ |
| ೧೩. | ಕರ್ನಾಟಕದ ಕಲೆ ಮತ್ತು<br>ವಾಸ್ತುಶಿಲ್ಪ<br>ರಂಜಿತಾ ಪ್ರಕಾಶನ<br>ತುಮಕೂರು | ೧೯೯೮ | ಕೆ.ಎಲ್.ಎನ್.ಮೂರ್ತಿ |
| ೧೪. | ರೇಖಾಚಿತ್ರ,<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು | ೨೦೦೮ | ಬಿ.ವಿ.ಕೆ.ಶಾಸ್ತ್ರೀ(ಸಂ) |
| ೧೫. | ಕಲ್ಯಾಣ ಚಾಲುಕ್ಯ ಶಿಲ್ಪಕಲೆ<br>ಕರ್ನಾಟಕ ಲಲಿತಕಲಾ ಅಕಾಡೆಮಿ,<br>ಬೆಂಗಳೂರು | ೨೦೦೮ | (ಸಂ)ಡಾ. ಎಚ್.ಎಸ್. ಗೋಪಾಲರಾವ್,<br>(ಲೇ)ಡಾ.ಕರುಣಾ ವಿಜಯೇಂದ್ರ |
| ೧೬. | ಗಣೇಶ ಧ್ಯಾನ,<br>ವಿಶ್ವವ್ಯಾಪಿ ಗಣೇಶ ಪ್ರಕಾಶನ<br>ಗಾಂಧಿನಗರ, ಸಾಗರ | ೨೦೧೦ | ಗೋವರ್ಧನ ಅಂಕೋಲೇಕರ್(ಸಂ) |
| ೧೭. | ಲೇಖಾವರಣ<br>(ಸಂಶೋಧನ ಬರಹಗಳು)<br>ಸರಚಂದ್ರ ಪ್ರಕಾಶನ,<br>ಚಿತ್ತಾಪುರ | ೨೦೦೯ | ಡಾ. ಮಲ್ಲಿಕಾರ್ಜುನ ಬಾಗೋಡಿ |
| ೧೮. | ಶಿಲ್ಪಿ ವೀರಪ್ಪ ಕುಂಬಾರ<br>ಕೊಟ್ಯಾಳ್ಕರ್ ಕಲಾ ಜೀವನ<br>ಕರ್ನಾಟಕ ಶಿಲ್ಪಕಲಾ ಅಕಾಡೆಮಿ<br>ಬೆಂಗಳೂರು | ೨೦೦೮ | ಡಾ. ಜಿ. ಲಕ್ಷ್ಮೀಪತಿ |
| ೧೯. | ದೃಶ್ಯಕಲೆ ಎಂದರೇನು?<br>ಜನಪ್ರಿಯ ಕಲಾಮಾಲಿಕೆ<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು | ೧೯೯೫ | ಚಿ.ಸು. ಕೃಷ್ಣಸೆಟ್ಟಿ |

| | | | |
|---|---|---|---|
| ೨೦. | ಕರ್ನಾಟಕ ಜಾತ್ರೆಗಳು<br>ಕನ್ನಡ ವಿಭಾಗ,<br>ಸ್ನಾತಕೋತ್ತರ ಕೇಂದ್ರ<br>ಬಿ.ಆರ್. ಪ್ರಾಜೆಕ್ಟ್,<br>ಮೈಸೂರು ವಿಶ್ವವಿದ್ಯಾಲಯ | ೧೯೮೮ | ಸಿ.ಎಸ್. ಶಿವಕುಮಾರಸ್ವಾಮಿ |
| ೨೧. | ಗದ್ದಿಗಿಮಠರ ಬರಹಗಳು<br>ಕನ್ನಡ ಅಧ್ಯಯನ ಸಂಸ್ಥೆ,<br>ಮೈಸೂರು ವಿಶ್ವವಿದ್ಯಾಲಯ | ೧೯೮೮ | ಡಾ. ಬಿ.ಎಸ್. ಗದ್ದಗಿಮಠ |
| ೨೨. | ಮೂರ್ತಿಶಿಲ್ಪ ನೆಲೆ-ಹಿನ್ನೆಲೆ<br>ಪ್ರಸಾರಾಂಗ ಬೆಂಗಳೂರು<br>ವಿಶ್ವವಿದ್ಯಾಲಯ | ೧೯೭೫ | ಎಸ್.ಕೆ. ರಾಮಚಂದ್ರರಾವ್ |
| ೨೩. | ಧರ್ಮ ಮತ್ತು ಮುಕ್ತ ವಿಚಾರ<br>ಪ್ರಸಾರಾಂಗ, ಕನ್ನಡ.ವಿ.ವಿ.ಹಂಪಿ | ೨೦೦೮ | ಯಳನಾಡು ಅಂಜನಪ್ಪ |
| ೨೪. | ಭಾರತೀಯ ಕಲೆ<br>ಕನ್ನಡ ಪುಸ್ತಕ ಪ್ರಾಧಿಕಾರ | ೨೦೦೯ | ಎನ್.ಮರಿಶಾಮಾಚಾರ್ |
| ೨೮. | ರಾಷ್ಟ್ರಕೂಟ ಶಿಲ್ಪಕಲೆ<br>ಕರ್ನಾಟಕ ಶಿಲ್ಪಕಲಾ ಅಕಾಡೆಮಿ<br>ಬೆಂಗಳೂರು | ೨೦೦೮(ಸಂ,ಲೇ) | ಡಾ.ಎಚ್.ಎಸ್. ಗೋಪಾಲರಾವ್ |
| ೨೯. | ವಿಶ್ವವ್ಯಾಪಿ ಗಣೇಶ<br>ವಿಶ್ವವ್ಯಾಪಿ ಗಣೇಶ<br>ಪ್ರಕಾಶನ ಸಾಗರ | ೧೯೭೫ | (ಸಂ) ಕೀರ್ತಿನಾಥ ಕುರ್ತಕೋಟಿ |
| ೩೦. | ಗಣಪತಿ ದರ್ಶನ<br>ಶ್ರೀ ಸಿದ್ಧಿವಿನಾಯಕ ದೇವಸ್ಥಾನ<br>ಹಟ್ಟಿ ಅಂಗಡಿ<br>ಕುಂದಾಪೂರ ತಾಲೂಕು<br>ದಕ್ಷಿಣ ಕನ್ನಡ ಜಿಲ್ಲೆ | ೧೯೯೭ | ಪ್ರೊ. ಎಚ್.ವಿ. ನರಸಿಂಹಮೂರ್ತಿ |
| ೩೧. | ಶಿವಪುರಾಣಾಮೃತ<br>ಪ್ರಕಾಶನ ಸಾಹಿತ್ಯ ನಂದನ<br>ಬೆಂಗಳೂರು | ೨೦೦೮ | ಮಾಗಡಿ ರಂಗನರಸಿಂಹಯ್ಯ |
| ೩೨. | ವರ್ಣ ಸಂಚಯ<br>ವಿಜಯ ಚಿತ್ರಕಲಾ ಮಹಾವಿದ್ಯಾಲಯ<br>ಇಲಕಲ್ಲ | ೨೦೦೧ | ಡಾ. ಎಸ್.ಸಿ. ಪಾಟೀಲ |
| ೩೩. | ಕಲಾವಿದ ವಿಜಯ ಸಿಂದೂರ<br>ಅವರ ಜೀವನ ಮತ್ತು ಕಲಾಕೃತಿಗಳ<br>ಒಳನೋಟಗಳು:ಒಂದು ಅಧ್ಯಯನ<br>(ಕ.ವಿ.ವಿ. ಹಂಪಿ, ಪಿಎಚ್.ಡಿ ಪ್ರಬಂಧ) | ೨೦೧೦ | ಸುನೀತಾ ಪಾಟೀಲ |

| | | | |
|---|---|---|---|
| ೩೫. | ಕರ್ನಾಟಕದ ರಥ ಶಿಲ್ಪಕಲೆ (ಕನ್ನಡ ವಿ.ವಿ.ಗೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧ) | ೨೦೦೫ | ಡಾ. ಶಿವಪ್ರಕಾಶ ತುಕ್ಕಣ್ಣವರ |
| ೩೬. | ಕರ್ನಾಟಕದ ಗಂಜೀಪಾ ಚಿತ್ರಕಲೆ (ಕನ್ನಡ ವಿ.ವಿ.ಗೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ) | ೨೦೧೧ | ಡಾ. ಶಂಕ್ರಪ್ಪ ಎಂ. ಕುಂದಗೋಳ |
| ೩೭. | ಶಂಕರ ಪಾಟೀಲರ ಜೀವನ ಮತ್ತು ಕಲಾಕೃತಿಗಳು (ಕನ್ನಡ ವಿ.ವಿ.ಗೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ) | ೨೦೧೧ | ಡಾ. ಕಿಶೋರ ದಾಟನಾಳ |
| ೩೮. | ಶಿಲ್ಪ ಸೌಂದರ್ಯ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಬೆಂಗಳೂರು | ೨೦೦೬ | ಕರುಗುಂದ ಟಿ. ಪಂಕಜಾಕ್ಷ |

## ಸಂಕ್ಷೇಪಗಳು

| | |
|---|---|
| ೧. ಪ್ರ.ಸಂ. | ಪ್ರಧಾನ ಸಂಪಾದಕರು |
| ೨. ಸಂ.ಲೇ. | ಸಂಪಾದಕರು ಮತ್ತು ಲೇಖಕರು |
| ೩. ಕ.ವಿ.ವಿ.ಹಂ. | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೪. ಪು.ಸಂ. | ಪುಟ ಸಂಖ್ಯೆ |
| ೫. ಮ.ಪ್ರ. | ಮಹಾಪ್ರಬಂಧ |
| ೬. ಸಂ. | ಸಂಪಾದಕರು |
| ೭. ಲೇ. | ಲೇಖಕರು |
| ೮. ದೃ.ಕ.ವಿ. | ದೃಶ್ಯಕಲಾ ವಿಭಾಗ |

